ಶ್ರೀ ಸಿದ್ಧಗಂಗಾ ಮಠಾಧ್ಯಕ್ಷ ತ್ರಿವಿಧ ದಾಸೋಹ ಮೂರ್ತಿಗಳಾದ

**ಪರಮ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ**

## " ವಜ್ರಮಹೋತ್ಸವ ನಿಧಿ ಸಮಿತಿ ".

" ಶಿವಪಥವನರಿವಡೆ ಗುರುಪಥವೇ ಮೊದಲು "

ಎಂಬಂತೆ ಪೂಜ್ಯ ಶ್ರೀ ಶ್ರೀ ಉದ್ದಾನ ಶಿವಯೋಗಿಗಳ ಕರಕಮಲ ಸಂಜಾತರಾಗಿ 60 ವರ್ಷಗಳ ಸೇವಾ ಮಣಿಹದ ಸ್ಮರಣೆಗಾಗಿ ನಾಡಿನ ಭಕ್ತಕೋಟಿ ವಜ್ರಮಹೋತ್ಸವ ಆಚರಿಸಲು ನಿರ್ಧರಿಸಿದೆ.

**ವಜ್ರಮಹೋತ್ಸವ ನೆನಪಿನ ಪ್ರತಿಷ್ಠಾನ :**
**4 ಕೋಟಿ ರೂಗಳ ವೆಚ್ಚದಲ್ಲಿ**
**ಬೃಹತ್ ವಿದ್ಯಾರ್ಥಿ ವಸತಿ ನಿಲಯ**
**ಮತ್ತು**
**ಬೃಹತ್ ಪ್ರಸಾದ ನಿಲಯ.**
(16-2-92) ರಂದು

ಭಾರತದ ರಾಷ್ಟ್ರಪತಿ ಡಾ|| ಶ್ರೀ ಶಂಕರದಯಾಳ ಶರ್ಮ ಮತ್ತು **ಲೋಕಸಭಾಧ್ಯಕ್ಷ ಶ್ರೀ ಶಿವರಾಜ್ ಪಾಟೀಲ್** ಇವುಗಳ ಶಿಲಾನ್ಯಾಸವನ್ನು ನೆರವೇರಿಸಿದ್ದಾರೆ.

5/-, 10/-, 25/-, 51/-, 101/-, 201/-, 501/-, 1001/ 5001/-, 10,001/-, 35,000 ರೂ.ಗಳ ಕೂಪನ್‌ಗಳು ನಿಧಿ ಸಂಗ್ರಹಕ್ಕಾಗಿ ಮಾರಾಟಕ್ಕೆ ಬಿಡುಗಡೆ ಮಾಡಿದೆ.

ಈ ಸ್ಮರಣಾರ್ಹವಾದ ಪುಣ್ಯಕಾರ್ಯಕ್ಕೆ ನಾಡಿನ ಭಕ್ತಾದಿಗಳು, ಹಿತೈಷಿಗಳು, ಹಳೆಯ ವಿದ್ಯಾರ್ಥಿಗಳು ಕೂಪನ್‌ಗಳನ್ನು ಕೊಳ್ಳುವುದರ ಮೂಲಕ ನಿಧಿಗೆ ಉದಾರವಾಗಿ ನೀಡಬೇಕಾಗಿ ಕೋರುತ್ತೇವೆ.

ಬಿ. ಎಸ್. ಮುದ್ದಪ್ಪ, ಐ.ಎ.ಎಸ್,
ಕಾರ್ಯಾಧ್ಯಕ್ಷರು,

ಎಸ್. ಎಸ್. ಹಸಬಿ,
ಕಾರ್ಯದರ್ಶಿಗಳು.

**ಪದ್ಮಭೂಷಣ ಡಾ|| ಎಂ. ಸಿ. ಮೋದಿ**
ಅಧ್ಯಕ್ಷರು,
ವಜ್ರಮಹೋತ್ಸವ ಸಮಿತಿ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104.

# ಸಿದ್ಧಗಂಗಾ

**ಸಂಪುಟ-29. ಸಂಚಿಕೆ-9. ಸೆಪ್ಟಂಬರ್-1993.**

ಹಿಂದಿನ ಮೂರು ಜನ್ಮ ಮುಂದೆ ಬಹ ಜನ್ಮಗಳ
ಕಂದು ಕುಂದಿಲ್ಲದೆ ಕಳೆದ ಗುರುವೆ । ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು||

§ § § §

ಹಡೆದವರಿಲ್ಲದ ಕಡುಬಡ ಕಂದಮ್ಮಗಳ
ಎಡೆಬಿಡದೆ ಸಲಹಿದೆ ನನ್ನತಂದೆ! ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು||

§ § § §

ತಬ್ಬಲಿ ಮಕ್ಕಳ ಹಬ್ಬ ಹುಣ್ಣಿಮೆ ಮಾಡಿ
ತಬ್ಬಿಸಲಹಿದೆ ನೀತಂದೆ! ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು||

- ಶ್ರೀ ಹೆಚ್.ವಿ. ವೀರಭದ್ರಯ್ಯ.

## ಶ್ರೀವಾಣಿ



ಪೂರ್ವಾಶ್ರಮದ ಒಂದು ನೆನಪು ನಾಗವಲ್ಲಿಯಲ್ಲಿ ವ್ಯಾಸಂಗ ಮಾಡುತ್ತಿದ್ದೆ. ಪ್ರಾಥಮಿಕ ಶಾಲೆ. ಆಗಿನ ಕಾಲದಲ್ಲಿ ಶಿಕ್ಷಕರೆಲ್ಲ ತಲೆಗೆ ಪೇಟವಿಲ್ಲದೆ ಬರುತ್ತಲೇ ಇರಲಿಲ್ಲ. ವಿದ್ಯಾರ್ಥಿಗಳು ತಲೆಗೆ ಟೋಪಿಯಿಲ್ಲದೆ ಬರುತ್ತಿರಲಿಲ್ಲ. ತರಗತಿಗಳಿಗೆ ಶಿಕ್ಷಕರಾಗಲೀ ವಿದ್ಯಾರ್ಥಿಗಳಾಗಲೀ ತಡವಾಗಿ ಬರುವುದಂತೂ ಮಹಾಪರಾಧವೆಂದೇ ಭಾವಿಸಿದ್ದ ದಿನಗಳು. ಶಿಕ್ಷಕರು ವಿದ್ಯಾರ್ಥಿಗಳ ಮೇಲೆ ಪ್ರಭಾವ ಬೀರುವಂಥವರಾಗಿರುತ್ತಿದ್ದರು. ಕೆಲವರು ತಮ್ಮ ಪಾಂಡಿತ್ಯದಿಂದ, ಕೆಲವರು ತಮ್ಮ ಪ್ರತಿಭೆಯಿಂದ, ಮತ್ತೆ ಕೆಲವರು ತಮ್ಮ ಸಂಘಟನಾ ಸಾಮರ್ಥದಿಂದ ಇತ್ಯಾದಿಯಾಗಿ ಮತ್ತೆ ಕೆಲವರು ತಮ್ಮ ಸಜ್ಜನತೆಯಿಂದ ವಿದ್ಯಾರ್ಥಿಗಳ ಮನಸ್ಸನ್ನು ಅಪಹರಿಸುವವರಾಗಿದ್ದರು. ಒಬ್ಬ ಶಿಕ್ಷಕರಂತೂ (ಹೆಸರು ನೆನಪಾಗುತ್ತಿಲ್ಲ) ಮನೆಯಿಂದ ಶಾಲೆಗೆ ಹೊರಟರೆ ಶಾಲೆ ಮುಟ್ಟುವವರೆಗೆ ದಾರಿಯುದ್ದಕ್ಕೂ ಅತ್ತ ಇತ್ತ ತಿರುಗಿ ನೋಡದೆ, ತಲೆತಗ್ಗಿಸಿಕೊಂಡೇ ನಡೆದು ಬರುತ್ತಿದ್ದರು. ಮಿತವಾಗಿ ಮಾತನಾಡುತ್ತಿದ್ದರು. ಹಿತವಾಗಿ ನಡೆದುಕೊಳ್ಳುತ್ತಿದ್ದರು. ಒಂದು ದಿನವೂ ಅವರು ಊರಿನ ಬೀದಿಗಳಲ್ಲಿ ತಿರುಗಾಡುತ್ತಿದ್ದಾಗ ತಲೆ ಎತ್ತಿ ಓಡಾಡಿದುದನ್ನು ಕಂಡದ್ದೇ ಇಲ್ಲ. ಅಷ್ಟು ಸಂಭಾವಿತರು ಸದಾ ತಮ್ಮ ವಿದ್ಯಾರ್ಥಿಗಳ ಚಿಂತೆ, ಅಧ್ಯಾಪಕ ವೃತ್ತಿಯ ಚಿಂತನೆ. ಅವರ ನಡವಳಿಕೆ ಮಲ್ಲಿಗೆ ಅರಳಿದಂತೆ ಎನ್ನಿಸುತ್ತಿತ್ತು. ಶಿಕ್ಷಕನನ್ನು ಲೋಕ ಸದಾ ನೋಡುತ್ತಿರುತ್ತದೆ. ಅದರಲ್ಲೂ ವಿದ್ಯಾರ್ಥಿ ಲೋಕ ನಿರಂತರ ಕಣ್ಣಿಟ್ಟಿರುತ್ತದೆ. ಅವನ ನುಡಿ-ನಡೆಗಳನ್ನು ಚಲನವಲನಗಳನ್ನು, ಶೀಲವ್ಯಸನಗಳನ್ನು ಗಮನಿಸುತ್ತಿರುತ್ತದೆ. ಶಿಕ್ಷಕನ ಪಾಂಡಿತ್ಯ, ಪ್ರತಿಬೆಗಳಿಗಿಂತ ಅವನ ಬದುಕನ್ನು ತೆರೆದ ಕಣ್ಣುಗಳಿಂದ ನೋಡುತ್ತದೆ. ಶಿಕ್ಷಕನ ನಿಜವಾದ ವಿಮರ್ಶಕರು ವಿದ್ಯಾರ್ಥಿಗಳು ಶಿಕ್ಷಕ ವಿದ್ಯಾರ್ಥಿಯ ಜೀವನದಲ್ಲಿ ಆದ್ಭುತ ಕ್ರಾಂತಿ ಮಾಡಬಲ್ಲ ಮಹಾಶಕ್ತಿ. ಮೃಗವನ್ನು ಮಾನವನನ್ನಾಗಿ ಪರಿವರ್ತಿಸುವ ಮಾಂತ್ರಿಕ, ನಮ್ಮ

ಕವಿ ಪರಂಪರೆಯನ್ನು ಗಮನಿಸಿದರೆ ಗುರು ಪರಂಪರೆಯ ಇತಿಹಾಸವೇ ಬೆಳಕಿಗೆ ಬರುತ್ತದೆ. ತಂದೆ ತಾಯಿಗಳ ಹೆಸರನ್ನು ಹೇಳಿಕೊಳ್ಳದ ಕವಿಗಳು ತಮ್ಮಗುರು ಸ್ಮರಣೆ ಮಾಡುವುದನ್ನು ಮಾತ್ರ ಮರೆತಿಲ್ಲ. ಸತ್ಪರಂಪರೆಯ, ಸುಸಂಸ್ಕೃತಿಯ ರಾಯಭಾರಿಗಳಾಗಬೇಕು, ವಾರಸುದಾರರಾಗಬೇಕು, ಇಂದಿನ ಶಿಕ್ಷಕರು. ಕುಲವಲ್ಲ, ಅಧಿಕಾರವಲ್ಲ, ಐಶ್ವರ್ಯವಲ್ಲ, ಪಾಂಡಿತ್ಯವಲ್ಲ, ಶೀಲಸಂಪತ್ತೊಂದೇ ಶಿಕ್ಷಕನ ನಿಜವಾದ ಸಂಪತ್ತು ಜನಾಂಗ ನಿರ್ಮಾಣ ಮಾಡುವ ಶಿಕ್ಷಕನೇ ಶೀಲಚ್ಯುತನಾದರೆ ಹೇಳುವುದಿನ್ನೇನು? ಭಗವಾನ್ ಬಸವಣ್ಣನವರಂತೆ ‘‘ಒಲೆ ಹತ್ತಿ ಉರಿದಡೆ ನಿಲಬಹುದಲ್ಲದೆ ಧರೆಹತ್ತಿ ಉರಿದಡೆ ನಿಲ್ಲಬಹುದೆ?” ಎಂದು ಹೇಳಬೇಕಾಗುತ್ತದೆ. ವಿದ್ಯಾರ್ಥಿಗಳು ಸುಧಾರಿಸ ಬೇಕಾದರೆ ಶಿಕ್ಷಕರು ಸುಧಾರಿಸಬೇಕು. ಶಿಕ್ಷಕರು ಸುಧಾರಿಸಿದರೆಂದರೆ ರಾಷ್ಟ್ರ ಸುಧಾರಿಸಿತೆಂದೇ ಭಾವನೆ.

ಹುಟ್ಟಿದ ಬೀಜವಿದ್ದಡೇನು ಧರೆಯೊಳಗೆ ? ಆಟ್ಟುಣಬಾರದ ಮಡಿಕೆ ಇದ್ದಡೇನಯ್ಯ ಮನೆಯೊಳಗೆ ? ಶಿವ, ನಿಮ್ಮ ಮುಟ್ಟದ ಮನವಿದ್ದಡೇನಯ್ಯ ತನುವಿನೊಳಗೆ ? ಕೆಚ್ಚಲ ಕಚ್ಚಿದ ಉಣ್ಣಿ ಬಲ್ಲುದೇ ಕ್ಷೀರದ ರುಚಿಯನು ? ಬಚ್ಚಲೊಳಗಣ ಬಾಲಹುಳು ಬಲ್ಲುದೇ ನಿಚ್ಚಳದ ನೀರಿನನುಭವವ ? ನಿಚ್ಚಲೋದುವ ಗಿಳಿಬಲ್ಲುದೇ ತನಗೆ ಬಹ ಬೆಕ್ಕಿನ ಬಾಧೆಯ ? ಪುಚ್ಚಗೊಂಡ ನಾಯಿ ಬಲ್ಲುದೆ ಸಾಕಿದೊಡೆಯನ ? ಇದು ಕಾರಣ ಒಡಲ ಪಡೆದರೇನು ? ಮಡದಿಯರ ನೆರಹಿದರೇನು ? ಒಡವೆಯ ಗಳಿಸಿದರೇನು ? ಶಿವನೇ, ನಿಮ್ಮನರಿಯದ ಮನುಜನ ಒಡಲೆಂಬುದು ಹೊಲೆ ಜೋಗಿಯ ಕೈಯ ಒಡೆದ ಸೋರೆಯಂತೆ ಕಾಣಾ ಕಲಿದೇವರದೇವಾ.



## ಶ್ರೀ ಸಿದ್ಧಲಿಂಗೇಶ್ವರ ವಚನ



ಆಚಾರವಿಲ್ಲದ ಗುರು ಭೂತ ಪ್ರಾಣಿ
ಆಚಾರವಿಲ್ಲದ ಲಿಂಗ ಶಿಲೆ
ಆಚಾರವಿಲ್ಲದ ಜಂಗಮ ಮಾನವ
ಆಚಾರವಿಲ್ಲದ ಪಾದೋದಕ ನೀರು
ಆಚಾರವಿಲ್ಲದ ಪ್ರಸಾದ ಎಂಜಲು
ಅಚಾರವಿಲ್ಲದ ಭಕ್ತ ದುಃಕರ್ಮಿ
ಇದು ಕಾರಣ

ಅಟ್ಟವನೇರುವುದಕ್ಕೆ ನಿಚ್ಚಣಿಕೆಯೇ ಸೋಪಾನವಯ್ಯಾ
ಹರಪದವನೆಯ್ದುವರೆ ಶ್ರಿಗುರು ಹೇಳಿದ ಸದಾಚಾರವೆ ಸೋಪಾನವಯ್ಯಾ
ಗುರೂಪದೇಶವ ಮೀರಿ ಮನಕ್ಕೆ ಬಂದಂತೆ ವರ್ತಿಸುವ ಪಾಪಿಗಳ
ಎನಗೊಮ್ಮೆ ತೋರದಿರಯ್ಯಾ
ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ ।

ಅಟ್ಟವನ್ನೇರಲು ನಿಚ್ಚಣಿಕೆ (ಏಣಿ) ಯು ಬೇಕಾಗುವಂತೆ ಶಿವ ಪದವನ್ನೇರಲು ಸದಾಚಾರವು ಬೇಕೇ ಬೇಕು. ಅಂತೆಯೇ ನಮ್ಮೆಲ್ಲರನ್ನು ದುಃಖದಿಂದ ಎತ್ತಿ ಹಿಡಿದು, ರಕ್ಷಿಸಲು ಬೇಕಾದ ಧರ್ಮಸಾಧನಗಳಲ್ಲಿ

ಆಚಾರಕ್ಕೆ ಬಹಳ ಮಹತ್ವವುಂಟು. ಅಂತೆಯೇ "ಆಚಾರಃ ಪ್ರಥಮೋ ಧರ್ಮಃ" ಆಚಾರವೇ ಮೊದಲನೆಯ ಧರ್ಮ ಎಂದು ಹೇಳಲಾಗಿದೆ. ಆಚಾರದಿಂದಲೇ ಗುರುವು ಗುರುವಾಗಬಲ್ಲ. ಆಚಾರದಿಂದಲೇ ಲಿಂಗ ಲಿಂಗವಾಗ ಬಲ್ಲುದು. ಆಚಾರದಿಂದಲೇ ಜಂಗಮ, ಜಂಗಮನಾಗ ಬಲ್ಲನು. ಆಚಾರದಿಂದಲೇ ಪಾದೋದಕವು ಪಾದೋದಕವಾಗಬಲ್ಲುದು ಆಚಾರದಿಂದಲೇ ಪ್ರಸಾದವು ಪ್ರಸಾದವಾಗ ಬಲ್ಲುದು. ಆಚಾರದಿಂದಲೇ ಭಕ್ತನು ಭಕ್ತನಾಗಬಲ್ಲನು. ಇಲ್ಲವಾದರೆ ಕ್ರಮವಾಗಿ ಗುರುವು ಭೂತ ಪ್ರಾಣಿ, ಲಿಂಗ ಕಲ್ಲು, ಜಂಗಮ ಮಾನವ, ಪಾದೋದಕ ನೀರು, ಪ್ರಸಾದ ಎಂಜಲು, ಭಕ್ತ ದುಷ್ಕರ್ಮಿಯಾಗುವನು. ಅದಕ್ಕಾಗಿ ಆಚಾರವನ್ನು ಮೀರಿ ಸ್ವಚ್ಛಂದವಾಗಿ ವರ್ತಿಸುವ ಪಾಪಿಗಳನ್ನು ನಾನು ನೋಡದಂತೆ ಕರುಣಿಸು ದೇವಾ ಎಂದು ಪ್ರಾರ್ಥಿಸಲಾಗಿದೆ. ಆಚಾರ ಭ್ರಷ್ಟರಾದ ಪಾಪಿಗಳ ದರ್ಶನವು ಕೂಡ ಪಾಪಕರವೇ ಆಗಿರುವುದು. ಆಚಾರವೇ ಮಾನವನಲ್ಲಿ ದೈವೀಶಕ್ತಿಯನ್ನು ಅರಳಿಸಿ ಅವನನ್ನು ದೇವನನ್ನಾಗಿ ಮಾಡಬಲ್ಲುದು.

( ಕೃಪೆ:- ಷಟ್‌ಸ್ಥಲ ಜ್ಞಾನಸಾರಾಮೃತ, ಶ್ರೀ ತೋ. ಸಿ. ಕೈ. ಸೇವಾಸಂಘ. )

## ದಿಟದ ದಿಟ

ಚಂದ್ರಕಲಾ ನಂದಾವರ, 'ದೃಶ್ಯ' ನಂ.5-190, ಕಾಟವಳ್ಳ, ಮಂಗಳೂರು ತಾ॥
–ದ. ಕ. ಜಿಲ್ಲೆ

ಏರಿದ ಎತ್ತರಡ ಖುಷಿಯಲ್ಲಿ
ಇಳಿಯಲು ಏಣಿ ಬೇಕಿಲ್ಲ ದಿಟ
ಏರಿದ ಮೇಲೆ ಏಣಿಯ ಹಂಗಿಲ್ಲ ದಿಟ
ಏರಿದವ ಇಳಿಯಲೇಬೇಕು
ಎನ್ನುವುದೂ ದಿಟ
ಏರಿದ ಅಮಲಲ್ಲಿ ಹಾರಲಾಗುವುದೂ ದಿಟ
ಹಾರಿದಾಗ ಮೂಳೆ ಮುರಿದಂತೆ
ಕಾಪಿಡಲಾದರೂ ಏಣಿಯ ಮರೆಯದಿರುವುದು
ದಿಟದ ದಿಟ

# ಸಂಪಾದಕೀಯ

### ಹುಣ್ಣಿಮೆ ಉಪನ್ಯಾಸ

ಶ್ರೀ ಮಠದಲ್ಲಿ ಶ್ರಾವಣಮಾಸದ ಹುಣ್ಣಿಮೆಯಂದು ಹುಣ್ಣಿಮೆ ಉಪನ್ಯಾಸ ಯೋಜನೆಯೊಂದು ಪ್ರಾರಂಭವಾಗಿದೆ. ಪ್ರತಿ ಹುಣ್ಣಿಮೆಯಂದು ಧಾರ್ಮಿಕ ಉಪನ್ಯಾಸ ನಡೆಯುತ್ತದೆ. ಅಂದು ಶ್ರೀಮಠಕ್ಕೆ ವಿಶೇಷವಾಗಿ ಯಾತ್ರಾರ್ಥಿಗಳು ಬರುತ್ತಾರೆ ಬಂದವರ ಧಾರ್ಮಿಕಾಭಿರುಚಿ ಸಂಸ್ಕಾರಕ್ಕಾಗಿ ಪ್ರಬುದ್ಧ ವಿದ್ವಾಂಸರಿಂದ ಉಪನ್ಯಾಸವನ್ನು ಏರ್ಪಡಿಸುವ ವ್ಯವಸ್ಥೆಯಾಗಿದೆ. ಈ ಶ್ರಾವಣದ ಹುಣ್ಣಿಮೆಯಿಂದ ಮುಂದೆ ಬರುವ ಶ್ರಾವಣದ ಹುಣ್ಣಿಮೆಯುವರೆಗೆ ಶರಣ ಧರ್ಮದ ಶ್ರೇಷ್ಠ ಕೃತಿಯಾದ "ಶೂನ್ಯ ಸಂಪಾದನೆ" ಯನ್ನು ಕುರಿತು ಉಪನ್ಯಾಸಗಳನ್ನು ಹನ್ನೆರಡು ಕಂತುಗಳಲ್ಲಿ ನೀಡುವ ಯೋಜನೆಯಾಗಿದೆ. ಹನ್ನೆರಡು ಉಪನ್ಯಾಸಗಳನ್ನು ಸದ್ಯಕ್ಕೆ ಒಬ್ಬರೇ ವಿದ್ವಾಂಸರು ಕೊಡುವ ವಿಧಾನವನ್ನು ಅಳವಡಿಸಲಾಗಿದೆ. ಮೊದಲಿಗೆ "ಶೂನ್ಯ ಸಂಪಾದನೆ" ಯ ಪೂರ್ಣಪಾಠವನ್ನು ಪರಿಚಯಿಸಿಕೊಂಡು ಅನಂತರ ಗ್ರಂಥದ ಬಗ್ಗೆ ಬಂದಿರುವ ವಿವಿಧ ವಿಮರ್ಶೆಗಳನ್ನು ತೂಗಿ ನೋಡುವ ಅವಕಾಶವನ್ನು ಕಲ್ಪಿಸಿಕೊಡುವ ಪ್ರಯತ್ನ ಇದಾಗಿದೆ. "ಶೂನ್ಯ ಸಂಪಾದನೆ" ಯನ್ನು ಕುರಿತು ಶಿವಯೋಗಿಗಳು, ಅನುಭಾವಿಗಳು, ವಿದ್ವಾಂಸರು, ತತ್ವಜ್ಞಾನಿಗಳು ಸಾಕಷ್ಟು ಚಿಂತನ-ಮಂಥನ ಮಾಡಿದ್ದಾರೆ. ಅದಕ್ಕೆ ಕಾರಣ ಆಕೃತಿಯ ಮಹತ್ವವೇ ಆಗಿದೆ. ಶ್ರೀ ಮಠಕ್ಕೆ ಬರುವ ಭಕ್ತಾದಿಗಳು ಒಂದೆರಡು ಭಾರಿ ಪರಮ ಪೂಜ್ಯ ಶ್ರೀ ಶ್ರೀ ಗಳವರಲ್ಲಿ 'ಶೂನ್ಯ ಸಂಪಾದನೆ' ಯ ಬಗ್ಗೆ ಮಾತಾಡಿದಾಗ, ವಿದ್ವಾಂಸರುಗಳು, ಚರ್ಚಿಸಿದಾಗ, ಮಠಾಧೀಶರು ಸಕ್ರಿಯ ಆಸಕ್ತಿ ವ್ಯಕ್ತಪಡಿಸಿದಾಗ-ಪರಮ ಪೂಜ್ಯ ಶ್ರೀ ಶ್ರೀ ಗಳು ಒಂದು ಉಪನ್ಯಾಸಮಾಲೆಯನ್ನೇ ಏಕೆ ಏರ್ಪಡಿಸಬಾರದೆಂದು ಆಲೋಚಿಸಿ ಕಾರ್ಯಶೀಲಗೊಳಿಸಿದರು. ಪ್ರತಿ ಹುಣ್ಣಿಮೆಯಂದು ಸಂಜೆ ಆರೂವರೆ ಘಂಟೆಯಿಂದ ಉಪನ್ಯಾಸ ನೀಡುವ ವ್ಯವಸ್ಥೆಯಾಗಿದೆ. ಒಂದು ವರ್ಷ ಪರಿಯಂತ ಹನ್ನೆರಡು ಉಪನ್ಯಾಸಗಳ ಮೂಲಕ "ಶೂನ್ಯ ಸಂಪಾದನೆ" ಯನ್ನು ಪರಿಚಯಿಸುವ ಸೇವಾ ಕೈಂಕರ್ಯವನ್ನು ಪ್ರೊ॥ ಜಿ. ಎಸ್. ಸಿದ್ಧಲಿಂಗಯ್ಯನವರು ವಹಿಸಿದ್ದಾರೆ. ಹೆಸರಾಂತ ಪ್ರಾಧ್ಯಾಪಕರು, ಕಾಲೇಜು ಶಿಕ್ಷಣದ ನಿವೃತ್ತ ನಿರ್ದೇಶಕರು, ಕನ್ನಡ ಸಾಹಿತ್ಯ ಪರಿಷತ್ತಿನ ನಿವೃತ ಅಧ್ಯಕ್ಷರು, ಶ್ರೇಷ್ಠ ಲೇಖಕರು, ಶರಣ ಸಾಹಿತ್ಯದಲ್ಲಿ ಆಳವಾದ ಅಧ್ಯಯನ ಮಾಡಿರುವವರು, ಶ್ರೀ ಮಠದ ಮೇಲಿನ ಅಭಿಮಾನದಿಂದ, ಪರಮ ಪೂಜ್ಯ ಶ್ರೀ ಶ್ರೀ ಗಳವರಲ್ಲಿರುವ ಶ್ರದ್ಧಾ ಭಕ್ತಿಗಳಿಂದ ತಮ್ಮನ್ನು ಈ ಉಪನ್ಯಾಸಮಾಲೆಯ ಯೋಜನೆಗೆ ಅರ್ಪಿಸಿಕೊಂಡಿದ್ದಾರೆ. ಇಂತಹ ಪವಿತ್ರ ಕಾರ್ಯಕ್ರಮ ನಡೆಯಲು ಸಹಾಯಕರಾಗಿ ಸೇವಾನಿರತರೂ ಮುಂದೆ ಬಂದಿರುತ್ತಾರೆ ಸಮಾಜ ಬಂಧುಗಳು, ಸಾಹಿತ್ಯಾಭಿಮಾನಿಗಳು, ಧರ್ಮಾಸಕ್ತರು, ಶರಣ ಸಿದ್ಧಾಂತ ಪ್ರೇಮಿಗಳು, ಪ್ರತಿ ಹುಣ್ಣಿಯಂದು ನಡೆಯುವ ಈ ಉಪನ್ಯಾಸಗಳ ಸದುಪಯೋಗ ಮಾಡಿಕೊಳ್ಳ ಬೇಕೆಂದು "ಸಿದ್ಧಗಂಗಾ" ಆಶಿಸುತ್ತದೆ.

**ಸಿದ್ಧಗಂಗಾ ಮಾಸ ಪತ್ರಿಕೆ**
**ಶ್ರೀ ಸಿದ್ಧಗಂಗಾ ಮಠ - 572 104**
ತುಮಕೂರು ಜಿಲ್ಲೆ

**ಡಾ॥ ಎಂ. ಎನ್. ಚನ್ನಬಸಪ್ಪ**
ಪ್ರಧಾನ ಕಾರ್ಯದರ್ಶಿಗಳು
ಹಳೆಯ ವಿದಾರ್ಥಿ ಸಂಘ

* * *

**ಶ್ರೀ॥ ಚನ್ನಪ್ಪ ಎರೇಸೀಮೆ**
ಪ್ರಧಾನ ಸಂಪಾದಕರು

* * *

**ಹೆಚ್. ವಿ. ವೀರಭದ್ರಯ್ಯ**
ಸಂಪಾದಕರು

* * *

**ಬಿ. ವೀರಭದ್ರಯ್ಯ**
**ಪಿ. ಎನ್. ಚಂದ್ರಶೇಖರಯ್ಯ**
**ಎಂ. ರೇಣುಕಾರಾಧ್ಯ**
ಸಂಪಾದಕ ಮಂಡಳಿ

* * *

**ಹೆಚ್. ಬಿ. ಗಂಗಾಧರಯ್ಯ**
ಪ್ರಕಾಶಕರು

* * *

**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ**
ಮುದ್ರಕರು

* * *

**ಶ್ರೀ ಸಿದ್ಧಗಂಗಾಕ್ಷೇತ್ರ**
ಪ್ರಕಟಣೆಯ ಸ್ಥಳ

**ಚಂದಾ ವಿವರ**
ವಾರ್ಷಿಕ ಚಂದಾ 25-00ರೂ
ಆಜೀವ ಸದಸ್ಯತ್ವ 300-00

**ಲೇಖಕರಲ್ಲಿ ಮನವಿ**

"ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ ಪೂಜ್ಯ ಶ್ರೀ ಶ್ರೀ ಡಾ॥ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

" ಸಂಪಾದಕರು "
'ಸಿದ್ಧಗಂಗಾ' ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲೆ-572104.

ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

# ಬಸವತತ್ತ್ವ ರತ್ನಾಕರ 20
## (ವಚನ ಕಾವ್ಯ ಸುಧಾಸಾಗರ)

ಶ್ರೀ ಮೋಟಗಿ ಮಲ್ಲಿಕಾರ್ಜುನ-"ಕನ್ನಡ ಕವಿ ಕಾಳಿದಾಸ" ಅಥಣಿ (ಬೆಳಗಾವಿ ಜಿಲ್ಲೆ )591304.

ಅತ್ಮತತ್ತ್ವ: "ಮುನ್ನ ಅಖಂಡ ಪರಂಜ್ಯೋತಿರ್ಮಯ ಮಹಾಲಿಂಗವೆ
ತನ್ನಸ್ವಲೀಲೆಯಿಂದ ತನ್ನತಾನರ್ಚಿಸಿ ಪೂಜಿಸಿಕೊಳ್ಳಲೆಂದು,
ಲೀಲಾ ವಿಲಾಸಂಗೊಂಡಿತ್ತು ನೋಡಾ;
ತನ್ನೇಕೈಕ ಅದ್ವಿತೀಯ ಆಖಂಡ'ಚಿಚ್ಛಕ್ತಿ ಸಹಸ್ರಾಂಶದೊಳಗೊದಂಶಮಂ
ಚೆನ್ನಾಗಿ ಬೇರ್ಪಡಿಸಲದೇ ಅತ್ಮವಾಯಿತ್ತು ನೋಡಾ!
ಧರೆಗೆ ಸೂರ್ಯ ಪ್ರಕಾಶದಿಂದನಂತಾನಂತ ಕಿರಣಂಗಳು ಚೆಲ್ವರಿವಂತೆ
ಉರಿವಗ್ನಿಯಿಂದ ಅಸಂಖ್ಯ ಕಿಡಿಗಳಾವಿರ್ಭವಿಸುವಂತೆ
ಪರಬ್ರಹ್ಮದಿಂದ ತದಂಶಭೂತರೆನೆ ಅನಂತಾನಂತ ಅತ್ಮರು
ಆವಿರ್ಭವಿಸಿದರು ನೋಡಾ!
ಮಹಾಲಿಂಗ ಜ್ಯೋತಿಯಿಂದುದ್ಭವಿಸಿದೀ ಕಿಡಿಗಳೆ ಆತ್ಮಗಳಾದಡೆ
ಮಹಾಲಿಂಗದ ಪಂಚವದನಗಳಿಂದುದ್ಭವಿಸಿದಾ ಸಾಪಾಖ್ಯಗಳಿಂದ
ಮೈದೋರಲಾದ ತತ್ತ್ವಂಗಳು ಆತ್ಮಂಗಳಿಗೆ ದೇಹವಾಗಿರ್ದುವು ನೋಡಾ!
ಆತ್ಮಂಗಳಿಗೆ ದೇಹ ಸಂಬಂಧವುಂಟಾಗೆ, ಅಜ್ಞಾನದಿಂ
ಆತ್ಮ ಬದ್ಧನಾಗಿ ತಾ ಜೀವನೆನಿಸಿರ್ದ ನೋಡಾ !
ಶ್ರೀ ಶೈಲ ಮಲ್ಲಿಕಾರ್ಜುನ !,,

**ಬಂಧಮೋಕ್ಷ : (180)**

" ಪರಮಾತ್ಮನ ಅಂಶವಾಗಿಪ್ಪ ಆತ್ಮ ಪ್ರಕೃತಿಯೊಳ್ ಬೆರೆದು
ಸುಖದುಃಖಗಳನನುಭವಿಸುತಿಪ್ಪನು ನೋಡಾ !
'ಅನಾದ್ಯವಿದ್ಯಾ ಸಂಬಂಧಾತ್ ತದಂಶೋ ಜೀವನಾಮಕಃ।'.
ಎಂದು ' ಸಿದ್ಧಾಂತ ಶಿಖಾಮಣಿ ' ಯೊರೆದುದಾಗಿ
ಪರಮಾತ್ಮನ ಅಂಶರೂಪನಾಗಿಪ್ಪ ಆತ್ಮ ಪ್ರಕೃತಿ ಸಂಬಂಧದಿಂದ
ಜೀವನೆನಿಸಿಹನು ನೋಡಾ !
ಇಂತು ಜೀವವನಾಶ್ರಯಿಸಿದೀ ಪ್ರಕೃತಿಯು
ಅಧೋಮಾಯೆಯೆನಿಸಿತ್ತು ನೋಡಾ !
ಶಿವನನಾಶ್ರಯಿಸಿದುದು ಊರ್ಧ್ವಮಾಯೆಯೆನಿಸಿತ್ತು ನೋಡಾ !
ಮೊದಲನೆಯದು ಅಶುದ್ಧಮಾಯೆ, ಎರಡನೆಯದು ಶುದ್ಧಮಾಯೆ,

ಅಶುದ್ಧ ಮಾಯೆಯಿಂ ಮೋಹವುಂಟಾಗಿತ್ತು !
ಆ ಮೋಹವೆ ಭವ ಬಂಧನ ದುಃಖ ಕಾರಣವೆನಿಸಿತ್ತು ನೋಡಾ !
ಈ ಮೋಹಕ್ಕೊಳಗಾದ ದೇಹಿ ದೇಹವೇ ತಾನೆಂದು ಬಗೆದು,
ಮೂಲ ಸ್ವರೂಪವನೆ ಮರೆದನು ನೋಡಾ !
'ಅಹಂಬ್ರಹ್ಮಾsಸ್ಮಿ' ಎಂಬುದ ಮರೆದು 'ಅಹಂದೇಹೋsಸ್ಮಿ'
ಎಂದು ಭಾವಿಸಿದನು ನೋಡಾ !
ಅವಿದ್ಯಾಶಕ್ತಿ ಭೇದದಿಂ ಜೀವಾತ್ಮ ನಾನಾ-
ರೂಪಂಗಳನು ಧರಿಸುತಿಪ್ಪನು ನೋಡಾ !
ಈ ಆತ್ಮನೆ ಸಕಲ ಪ್ರಾಣಿಗಳ ಹೃದಯ-
ಪೀಠಸ್ಥನಾಗಿ ಬೆಳಗುತಿರ್ದನು ನೋಡಾ !
ಇಂತು ಬದ್ಧನಾಗಿಪ್ಪ ಜೀವ, ಶುದ್ಧಿವಡೆದು,
ಕರ್ಮಕಳೆದು, ಮಲತ್ರಯ ಹರಿದು, ಭಕ್ತಿಬಲಿದು,
ಲಿಂಗಲೀಯವಾಗಲದೆ ಮೋಕ್ಷವೆನಿಸಿತ್ತು !
ಕಾಣಾ ಶ್ರೀ ಶೈಲಮಲ್ಲಿಕಾರ್ಜುನ ! "

## ತತ್ತ್ವ (181)

"ಆ ಪ್ರಲಯಂ ಯತ್ತಿಷ್ಠತಿ ಸರ್ವೇಷಾಂ ಭೋಗದಾಯಿ ಭೂತಾನಾಂ !
ತತ್ತ್ವಮಿತಿ ಪ್ರೋಕ್ತಂ ನಶರೀರ ಘಟಾದಿ ತತ್ತ್ವಮತಃ ||
ಇಂತು 'ಭೋಜಪ್ರಣೀತ ತತ್ತ್ವ ಪ್ರಕಾಶಿಕಾ ' ಎಂದುದಾಗಿಃ
ಸೃಷ್ಟಿಯುತ್ಪತ್ತಿಯಿಂದಾರಂಭವಾಗಿ ಪ್ರಳಯದ ಪರ್ಯಂತ ನಿಂದು
ಆವುದು ಆತ್ಮಂಗಳಿಗೆ ಭೋಗಮನುಂಟು ಮಾಳ್ಪುದೊ
ಅದನ್ನೆ ತತ್ತ್ವವೆಂದು ಕರೆಯುವರು ಕಾಣಾ, ಕಲಿಯುಗದ
ದೇವ ! ಶ್ರೀ ಮಲ್ಲಿಕಾರ್ಜುನ ! "

## (182)

ವೀರಶೈವ ಮೋಕ್ಷ : "ಪರಬ್ರಹ್ಮವೆ ಲಿಂಗ–ಲಿಂಗವೆಂದೆರಡಾಯಿತ್ತು ನೋಡಾ!
ಅಂಗವೆಂದಡೆ ಜೀವಾತ್ಮ, ಲಿಂಗವೆಂದಡೆ ಪರಬ್ರಹ್ಮ ನೋಡಾ
ಲಿಂಗಗತವಾಗಿರ್ದ- ಶಕ್ತಿ ಅಂಗದೊಳ್ ಭಕ್ತಿಯಾಗಿ ನೆಲಸಿತ್ತು ನೋಡಾ!
ಈ ಶಕ್ತಿ – ಭಕ್ತಿಗಳು ಬಳೆದು ಸಮರಸವಾಗಲದ್ವೈಲಿಂಗಾಂಗಸಾಮರಸ್ಯ'!
ಇದೆ ವೀರಶೈವದ ಮೋಕ್ಷ ಕಾಣಾ, ಶ್ರೀ ಶೈಲಮಲ್ಲಿಕಾರ್ಜುನ !"



## (183)

ಭಕ್ತಿಯೇಮುಕ್ತಿ :

"ಶುದ್ಧಾತ್ಮನಾಗಿಪ್ಪ ಅಂಗನೊಳ್ ಪರಮಾತ್ಮ ಶಕ್ತಿಯೆ
ಭಕ್ತಿಭಾವದೊಳಿರ್ಪುದು ನೋಡಾ !
ಆ ಭಕ್ತಿಯೆ ಲಿಂಗವಂತನ ಮುಕ್ತಿಯಾಗಿಪ್ಪುದು ನೋಡಾ !"
ಅಂಗನು ಲಿಂಗಮುಖಕ್ಕೆ ಅರ್ಪಣ ಮಾಳ್ಪುದೆ ಭಕ್ತಿನೋಡಾ.
ಆ ಭಕ್ತಿಯೆಂಬುದು ಎರಡಿಲ್ಲದ ಕೂಟವೆನಿಸಿತ್ತು ನೋಡಾ
ಆ ಎರಡಿಲ್ಲದ ಕೂಟವೆ ಮುಕ್ತಿ ಎನಿಸಿತ್ತು ನೋಡಾ !
ಆ ಮುಕ್ತಿ ಸ್ವರೂಪವೆ ಮಹಾಘನಲಿಂಗ;
ಮಹಾಘನಲಿಂಗವೆ ಅಖಂಡ ಪರಿಪೂರ್ಣ
ಚೈತನ್ಯಚಿತ್‌ಸ್ವರೂಪ ನೋಡಾ
ಸಚ್ಚಿದಾನಂದ ನಿತ್ಯ ಪರಿಪೂರ್ಣ ಸ್ಥಿತಿಯೆ ಆ ಪರಮ ಮುಕ್ತಿ
ಕೈವಲ್ಯಕಾಣಾ' ಶ್ರೀ ಶೈಲಮಲ್ಲಿಕಾರ್ಜುನ !"

## (184)

ಪ್ರಳಯ ವಿರಹಿತ ಶರಣ :

"ತನುಲಿಂಗವಾದ ಬಳಿಕ ವಿಕಾರವುಂಟೇನಯ್ಯಾ
ಮನಲಿಂಗವಾದ ಬಳಿಕ ಮಾಯೆಯುಂಟೇನಯ್ಯಾ
ಭಾವಲಿಂಗವಾದ ಬಳಿಕ ಭ್ರಮೆಯುಂಟೇನಯ್ಯಾ
ಕಾಯಲಿಂಗವಾದ ಬಳಿಕ ಕಳವಳವಿಲ್ಲವಯ್ಯಾ
ಜೀವಲಿಂಗವಾದ ಬಳಿಕ ಉಪಾಧಿ ಇಲ್ಲವಯ್ಯಾ !
ಪ್ರಾಣ ಲಿಂಗವಾದ ಬಳಿಕ ಪ್ರಳಯವಿಲ್ಲವಯ್ಯಾ
ಇಂತು ಶಿವಬೀಜವಾಗಿಪ್ಪ, ಎಮ್ಮ ಶರಣ ಮಹಂತ,
ಪ್ರಳಯ ವಿರಹಿತ ಕಾಣಾ, ಶ್ರೀ ಶೈಲಮಲ್ಲಿಕಾರ್ಜುನ;

## (185]

ಐಕ್ಯಾನುಭವ ಪ್ರಸಾದ :

"ಎನ್ನ ಕಾಯದಿಂದ ನಿನ್ನ ಕಾಯ ಬೇರಿಲ್ಲವಯ್ಯಾ!
ನಿನ್ನ ಕಾಯದೊಳಗೆ ಎನ್ನ ಕಾಯ ಕೂಡಿಕೊಂಡಿತ್ತು ನೋಡಾ!
ಎನ್ನ ಜೀವದಿಂದ ನಿನ್ನ ಜೀವ ಬೇರಿಲ್ಲವಯ್ಯಾ !
ನಿನ್ನ ಜೀವದೊಳಗೆ ಎನ್ನ ಜೀವ ಕೂಡಿಕೊಂಡಿತ್ತು ನೋಡಾ !

ಎನ್ನ ಪ್ರಾಣದಿಂದ ನಿನ್ನ ಪ್ರಾಣ ಬೇರಿಲ್ಲವಯ್ಯಾ !
ನಿನ್ನ ಪ್ರಾಣದೊಳಗೆ ಎನ್ನ ಪ್ರಾಣ ಕೂಡಿಕೊಂಡಿತ್ತು ನೋಡಾ !
ನಿನ್ನ ಇಂದ್ರಿಯಂಗಳಿಂದ ಎನ್ನ ಇಂದ್ರಿಯಗಳು ಬೇರಿಲ್ಲವಯ್ಯಾ !
ನಿನ್ನ ಇಂದ್ರಿಯಂಗಳೊಳಗೆ ಎನ್ನ ಇಂದ್ರಿಯಂಗಳು ಕೂಡಿಕೊಂಡಿರ್ಪುವು ನೋಡಾ!
ಎನ್ನ ವಿಷಯಂಗಳಿಂದ ನಿನ್ನ ವಿಷಯಂಗಳು ಬೇರಿಲ್ಲವಯ್ಯಾ!
ನಿನ್ನ ವಿಷಯಂಗಳೊಳಗೆ ಎನ್ನ ವಿಷಯಂಗಳು ಕೂಡಿಕೊಂಡಿರ್ಪುವು ನೋಡಾ!
ಎನ್ನ ಕರಣಂಗಳಿಂದ ನಿನ್ನ ಕರಣಂಗಳು ಬೇರಿಲ್ಲವಯ್ಯಾ
ನಿನ್ನ ಕರಣಂಗಳೊಳಗೆ ಎನ್ನ ಕರಣಂಗಳು ಕೂಡಿಕೊಂಡಿರ್ಪುವು ನೋಡಾ
ಇಂತು ನಾನೆ ಸಾಕಾರ, ನೀನೆ ನಿರಾಕಾರವಯ್ಯಾ !
ಸಾಕಾರಕ್ಕೆ ಅಳಿವುಂಟು, ನಿರಾಕಾರಕ್ಕೆ ಅಳಿವಿಲ್ಲ ನೋಡಾ !
ಆನು ಕರ್ಪೂರವಾದೆ, ನೀನು ಜ್ಯೋತಿಯಾದೆ,
ಆನು ನಿಮ್ಮೊಳಡಗಿದೆನಯ್ಯಾ! ಶ್ರೀ ಶೈಲಮಲ್ಲಿಕಾರ್ಜುನ !,

[186]

ಶಿವಶಕ್ತಿಲೀಲೆ: "ಶಿವಶಕ್ತಿ ಪಾರ್ವತಿಯೆನಿಸಿ ತೊಡೆಯನೇರಿ ಕುಳಿತಿತ್ತು ಮಾಯೆ!
ವಿಷ್ಣುವಿನ ಶಕ್ತಿ ಲಕ್ಷ್ಮಿಯೆನಿಸಿ ಎದೆಯನೇರಿ ಕುಳಿತಿತ್ತು ಮಾಯೆ!
ಬ್ರಹ್ಮನ ಶಕ್ತಿ ಸರಸ್ವತಿಯೆನಿಸಿ ನಿಂದಿತ್ತು ಮಾಯೆ!
ಇಂತಪ್ಪ ಊರ್ಧ್ವ ಮಾಯಾ ಶಕ್ತಿ ಪರಬ್ರಹ್ಮದ ಲೀಲೆಗೆ ಕಾರಣ
ವೆನಿಸಿತ್ತು ನೋಡಾ!
ಅಖಂಡ ತೇಜೋಮೂರ್ತಿ ನಿರಾಕಾರ ನಿರಂಜನ
ನಿಷ್ಕಲ ಪರಶಿವನ ಚಿತ್‌ಶಕ್ತಿ, ಪರಾಶಕ್ತಿ, ಆದಿಶಕ್ತಿ,
ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿಯೆನಿಸಿ
ಪ್ರಣವ ಸ್ವರೂಪವಾಗಿಪ್ಪ ಮಹಾಲಿಂಗಲೀಲಾ ವಿಲಾಸಗೊಂಡಿತ್ತು.
ಕಾಣಾ, ಶ್ರೀಶೈಲಮಲ್ಲಿಕಾರ್ಜುನ !

ಮಾಯಾ ವಿಲಾಸ :

[187]

" ಬಿಂದು ಎಣ್ಣೆಯದು, ಸಾಗರದ ಜಲವನೆಲ್ಲ ಆವರಿಸಿಕೊಂಡಿಪ್ಪಂತೆ,
ಸಂದ ಶಿವಶಕ್ತಿಮಾಯೆ ತಾನು ಆತ್ಮಸಾಗರವನೆಲ್ಲ ವ್ಯಾಪಿಸಿಕೊಂಡಿರ್ದಳು ನೋಡಾ!
ಆಕಾಶದೊಳು ನೆರೆದು ಪೋಗುವಾ ಮೇಘಂಗಳಿಂದ
ಆಕಾಶಕ್ಕೆ ಆವ ಕುಂದಿಲ್ಲದಿರ್ಪಂತೆ !
ಬಹುರೂಪಿಂಮಿಗೆ ಬರ್ಪುವಾ ಮೇಘಗಳಿ ಪೋಗಲಾಗುವಾ ಕುಂದದೇನ್ !'
ಎಂದು - 'ಆತ್ಮಸ್ವಾತಂತ್ರ್ಯ " (ಜ್ಯೋತಿರ್ಮಯ ಕಾವ್ಯ]



ಸುಲಲಿತವಾಗಿ ಹೇಳುವಂತೆ ! "ಧರ್ಮಜ್ಞ ಕವಿಕೃತ'
ಮಾಯೆ ಆವರಿಸಿರ್ಪ ಆತ್ಮಂಗೆನಿತು ದೇಹಂಗಳು ಬಂದೊಡು
ಆತ್ಮಕುಂದಿಲ್ಲದಿಪ್ಪ ಕಾಣಾ, ಶ್ರೀಶೈಲಮಲ್ಲಿಕಾರ್ಜುನ !'

## ತ್ರಿವಿಧ ಕರ್ಮನಾಸ್ತಿ

ತ್ರಿವಿಧ ಪಾದೋದಕ : [188]

"ತ್ರಿವಿಧ ಪಾದೋದಕದ ಪರಿಯೆಂತೆಂದಡೆ :
ಕರುಣ ಜಲವೆ ಗುರುಪಾದೋದಕವೆನಿಸಿತ್ತು,
ವಿನಯ ಜಲವೆ ಲಿಂಗಪಾದೋದಕವೆನಿಸಿತ್ತು,
ಸಮತಾ ಜಲವೆ ಜಂಗಮಪಾದೋದಕವೆನಿಸಿತ್ತು,
ಗುರುಪಾದೋದಕದಿಂದ ಸಂಚಿತಕರ್ಮ ಕಳೆದುಹೋಯಿತ್ತು,
ಲಿಂಗ ಪಾದೋದಕದಿಂದ ಪ್ರಾರಬ್ಧ ಕರ್ಮ ಅಳಿದು ಹೋಯಿತ್ತು,
ಜಂಗಮ ಪಾದೋದಕದಿಂದ ಆಗಾಮಿ ಕರ್ಮ ಕರಗಿ ಹೋಯಿತ್ತು,
ಇಂತೀ ತ್ರಿವಿಧೋದಕದಲ್ಲಿ ತ್ರಿವಿಧ ಕರ್ಮನಾಸ್ತಿಯಾಯಿತ್ತು ನೋಡಾ !
ಇದು ಕಾರಣ ತ್ರಿವಿಧೋದಕವ ನಿಮ್ಮ ಶರಣನೇಬಲ್ಲಕಾಣಾ !
ಶ್ರೀ ಶೈಲಮಲ್ಲಿಕಾರ್ಜುನ!

ಪರಮಾತ್ಮನ ಸ್ವರೂಪ [189]

"ಪರಂಜ್ಯೋತಿ ಪರಬ್ರಹ್ಮನ ಸ್ವರೂಪವೆಂತೆಂದಡೆ:
'ಅಣೋರಣೀಯಾನ್ ಮಹತೋ ಮಹೀಯಾನ್" ಎಂಬಂತೆ,
ಅಣುವಿಂಗೆ ಅಣು, ಮಹತ್ತಿಂಗೆ ಮಹತ್ತು,
ಎಣಿಸಬಾರದ ಪರವಸ್ತುವಿಂಗೆಣೆಯಾವುದಯ್ಯಾ?
ಅಗಣಿತನು, ಅಕ್ಷಯಾನು. ಅಪ್ರಮೇಯನು,
ಬಗೆಬಗೆಯ ಸರ್ವಜೀವ-ಭಾವ-ಮನಃ ಪ್ರೇರಕನು,
ಸರ್ವಜೀವ ದಯಾಪರನು, ಸರ್ವಾಂತರ್ಯಾಮಿಯೆನೆ,
ಸರ್ವಜ್ಞನೆನಿಸಿ, ಏಕೋದೇವ ಸಂವಿತ್ ಪ್ರಕಾಶ ಪರಬ್ರಹ್ಮ
ಸ್ವರೂಪನಾಗಿರ್ದನಯ್ಯಾ!
ಮನವೆಂಬ ದರ್ಪಣದೊಳಗೆ ಬಿಂದ್ವಾಕಾಶರೂಪಾಗಿ
ಚಿನುಮಯ ಶಿವನು ಬೆಳಗಿ ತೋರುತಿರ್ದನಯ್ಯಾ
ವಿಶ್ವರೂಪಿಯನೆ ಪರಮಾತ್ಮನ ದೇಹವೆ ಬ್ರಹ್ಮಾಂಡ ನೋಡಾ!
ಸೃಷ್ಟಿಯ ಅಂಗಾಂಗಗಳಾಗಿಪ್ಪುವು ನೋಡಾ!

(ಫೆಬ್ರವರಿ-ಮಾರ್ಚಿ ಸಂಚಿಕೆಯಿಂದ ಮುಂದುವರಿದ ಲೇಖನ)

ಪಾತಾಳದಲ್ಲಿ ಪಾದ, ಸುವರ್ಲೋಕದಾಚೆಗೆ ಶಿಖಿ'
ಗಗನವೆ ಮುಖ' ರವಿ-ಶಶಿಯರೇ, ನಯನಂಗಳಾಗಿರ್ದರು ನೋಡಾ
ದಶದಿಕ್ಕುಗಳೆ ಬಾಹುಗಳೆನೆ ಮಹದಾಕಾಶವೆ ಒಡಲಾಗಿಹುದು ನೋಡಾ
ತರುಗಳೇ ತನು ರೂಪುಗಳೆನೆ, ಶೂನ್ಯವೆ ಅವನ ಚಿಲ್ಲಿಂಗವೆನಿಸಿಹುದು ನೋಡಾ!
ನಕ್ಷತ್ರಂಗಳೇ ಪುಷ್ಪಗಳೆನೆ, ನೀಲಶ್ಯಾಮಲ ವರ್ಣದ
ಮೇಘವೆ ಜಡೆಯೆನಿಸಿಹುದು ನೋಡಾ !
ಬೆಳುದಿಂಗಳೇ ಶಿವ ಮಂದಹಾಸದೊಲು ಭಸ್ಮವೆನಿಸಿದೊಡೆ,
ಪರ್ವತಂಗಳೆ ರುದ್ರಾಕ್ಷಿಗಳಾಗಿಹವು ನೋಡಾ !
ಮೇರು ಪರ್ವತವೆ ಅವನ ಯೋಗ ದಂಡವಾದಡೆ,
ದಿಕ್ಕುಗಳೇ ಅಂಬರವೆನಿಸಿದುವು ನೋಡಾ !

ಜಗತ್ತೆ ಬಟ್ಟೆ, ಅನಂತ ಜೀವರುಗಳೆ ಅವನ ಬಾಯಿ,
ಚತುರ್ಯುಗಂಗಳೆ ಗಮನವೆನಿಸಿಹವು ನೋಡಾ !

ಮಿಂಚೆ ಅಂಗದ ಬೆಳಗೆನಿಸಿದಡೆ, ಸಿಡಿಲೆ ಧನಿಯಾಗಿ,
ಪೃಥ್ವಿಯೇ ಸಿಂಹಾಸನವಾಗಿಪ್ಪುದು ನೋಡಾ !
ದಿವಾ ರಾತ್ರಿಯೆ ಅವನ ಕಣ್ಣೆವೆ ಹಳಚುವಿಕೆಯೆನೆ,
ತನ್ನ ಅಸ್ತಿತ್ವದ ಜ್ಞಾನವೆ ಸಕಲೈಶ್ವರ್ಯವಾಗಿಹುದು ನೋಡಾ!

ನಿತ್ಯನಿರಾಳವೆ ತೃಪ್ತಿಯೆನಿಸಿ, ಸ್ವಾನುಭಾವವೆ ಸುಯಿಧಾನವೆನಿಸಿ'
ಇಂತು ಪರಮಾತ್ಮನ ವಿರಾಟ್ ರೂಪದ ಲೀಲಾ ವಿಲಾಸವಾಯಿತ್ತು ನೋಡಾ
ಇಂತು ವಿರಾಟ್ ರೂಪವಾಂತ ಪರಶಿವನು

ಅಗ್ನಿ ಉಷ್ಣತೆಯೊಡೆಯನಾಗಿ, ಚಂದ್ರಕಾಂತದೊಡೆಯನಾಗಿ,
ಸೂರ್ಯಕಾಂತದೊಡೆಯನಾಗಿ, ತ್ರೈಲೋಕ್ಯದ
ತ್ರಿಮೂರ್ತಿಗಳಿಗೂ ಆಯುಷ್ಯ ಭಾಷೆಯ ಕೊಟ್ಟ
ಭೋಗದೊಡೆಯನಾಗಿ, ಮಹಾಲಿಂಗಲೀಲಾವೈಭವ
ವಿಲಾಸಗೊಂಡು ಅಖಂಡ ಪರಂಜ್ಯೋತಿಯೆನೆ

ರಾಜತೇಜದಲ್ಲಿ ತಾನೆತಾನಾಗಿ ಬೆಳಗುತಿರ್ದನು !
ಕಾಣಾ, ಶ್ರೀಶೈಲಮಲ್ಲಿಕಾರ್ಜುನ ! "

# ಕೆಲಸದ ಜತೆಗೇ ಗುಣುಗುಣಿಸಿರಿ

ಬಿ. ಸುಬ್ರಾಯ ಅಡಿಗ, ನಿವೃತ್ತ ಉಪಾಧ್ಯಾಯರು, ಸಂಡೂರು, ಬಳ್ಳಾರಿ ಜಿಲ್ಲೆ–583119

'ಕೆಲಸ.. ಕೆಲಸ....ಕೆಲಸ... ಸಾಕಾಗಿ ಹೋಯಿತು'—ಎಂದು ಗೊಣಗಿದಳು ನಮ್ಮ ನೆರೆಮನೆಯ ಪುಷ್ಪ. ಕೆಲಸವೆಂದರೆ ಆಕೆಗೆ ತಲೆನೋವು. ಯಾವಾಗಲೂ ಸಿಡಿಮಿಡಿಗೊಂಡಿರುವುದೇ ಅವಳ ಅಭ್ಯಾಸ. ಇದೇನೂ ಇಂದು ನಿನ್ನೆಯ ಮಾತಲ್ಲ.... ಆಕೆಯ ಗಂಡ ಹಾಗೂ ಮಕ್ಕಳು ಅವಳ ಈ ಅಭ್ಯಾಸದಿಂದ ರೋಸಿ ಹೋಗಿದ್ದಾರೆ. ಮನೆಯಿಡೀ ಉದ್ವೇಗದ ವಾತಾವರಣದಿಂದ ತುಂಬಿರುತ್ತದೆ.

ವಿಚಾರ ಮಾಡಿದರೆ ಎಲ್ಲರ ಮನೆಯಲ್ಲೂ ಕೆಲಸ ಇದ್ದೇ ಇರುತ್ತದೆ. ಆದರೆ ದೈನಂದಿನದ ಕೆಲಸವನ್ನೇ ತಲೆನೋವೆಂದು ಭಾವಿಸಿದರೆ ಜೀವನ ಸಾಗುವುದೆಂತು? ಈ ಸ್ಥಿತಿಯಲ್ಲೇ ಇರುವುದು ನಿತ್ಯನರಕವೆನಿಸದೆ!

ನಮ್ಮ ಮನೆಯ ಬಲ ಬದಿಯಲ್ಲಿ 'ಕಾಂತಾ'ಳ ಮನೆಯಿದೆ. ಆಕೆಯಾವಾಗಲೂ ನಗುನಗುತ ಉಲ್ಲಾಸದಿಂದ ಕೆಲಸ ಮಾಡುತ್ತಾಳೆ. ಇಡೀಮನೆಯ ಎಲ್ಲ ಕೆಲಸ–ಗಳನ್ನು ಬಹು ಬೇಗನೆ ಮಾಡಿ ಮುಗಿಸುತ್ತಾಳೆ. ಇಷ್ಟಾದರೂ ಅವಳ ಮೋರೆಯ ಮೇಲೆ ಸಿಡುಕಾಗಲೀ ಬೇಸರವಾಗಲೀ ಕಾಣಿಸುವುದಿಲ್ಲ. ಆಕೆಯ ವ್ಯವಹಾರ ಮಾತುಕತೆ ಎಲ್ಲವು ಮನಮೋಹಕವಾದುದು.

ಒಂದು ದಿನ ನಾನು ಆಕೆಗೆ ಪುಷ್ಪಾಳ ಗೋಳನ್ನು ತಿಳಿಸಿ, ಈ ಸ್ಥಿತಿಯಿಂದ ಅದೆಂತು ಪಾರಾಗಬಹುದೆಂದು ಕೇಳಿದೆ. ಅದಕ್ಕೆ ಅವಳು ತುಂಬ ಸರಳವಾಗಿ ಹೀಗೆಂದಳು :- "ಕೆಲಸದ ವೇಳೆ ಉದ್ವೇಗ ಪಡಬಾರದು ... ನಮ್ಮನ್ನು ಶಿಥಿಲಗೊಳಿಸಕೊಳ್ಳಬೇಕು-ಏನನ್ನಾದರೂ ಗುಣುಗುಣಿಸುತ್ತಿರಬೇಕು ... ಕೆಲಸಗಳೆಲ್ಲ ಬಹುಬೇಗನೆ ನಡೆದು ಹೋಗುವುವು

ನಾನು ಕಾಂತಳನ್ನು ಲಕ್ಷ್ಯಗೊಟ್ಟು ನೋಡಿದೆ. ಆಗಲೇ ನನ್ನ ಅಜ್ಜಿಯ ಮಾತು ನೆನಪಾಯಿತು. ಕೆಲಸ ಮಾಡುವ ವೇಳೆ ಏನನ್ನಾದರೂ ಹಾಡುತ್ತಲೋ ಗುಣುಗುಣಿಸುತ್ತಲೋ ಇರುವ ಚಟ ಮನಗಂಟಿತ್ತು. ನಮ್ಮ ತಾಯಿಗೆ ಅದು ಸರಿಬರುತ್ತಿರಲಿಲ್ಲ. ಪರಂಪರಾಗತ ಸಂಸ್ಕಾರಗಳಿಂದಾಗಿ ಆಕೆ ನಮ್ಮನ್ನು ಗದರಿಸುತ್ತಿದ್ದಳು. ಒಂದು ದಿನ ಇದನ್ನು ಕಂಡ ಅಜ್ಜಿ—ಅವಳನ್ನೇಕೆ ಗದರಿಸುತ್ತಿ ? ಕೆಲಸದ ವೇಳೆ ಹಾಡುವುದು ತುಂಬ ಒಳ್ಳೆಗುಣ. ಇದರಿಂದ ಕೆಲಸ ಮಾಡುವ ಶಕ್ತಿ ಹೆಚ್ಚುತ್ತದೆ. ಆಯಾಸ ಹಾಗೂ ಬೇಸರ ದೂರಾಗುತ್ತದೆ—ಎಂದಳು.



ಹೆಂಡತಿ ಅಥವಾ ಮಗಳು ಕೆಲಸಮಾಡುವಾಗ ಗುಣುಗುಣಿಸುತ್ತಿದ್ದರೆ ಗಂಡ ಅಥವಾ ತಂದೆ ಸಹಜವಾಗಿಯೇ ಮುಗುಳ್ನಗುತ್ತಾರೆ. ಆಫೀಸಿನಿಂದ ದಣಿದುಬಂದಿದ್ದರೂ ಕ್ಷಣಮಾತ್ರದಲ್ಲಿ ಅವರ ದಣಿವು ಮಾಯವಾಗುತ್ತದೆ. ಸಣ್ಣ ಮಕ್ಕಳು ತಮ್ಮ ತಾಯಿ ಹಾಡುವುದನ್ನು ಕಂಡು ತಾವೂ ಹಾಡ ತೊಡಗುತ್ತವೆ. ಹೀಗೆ ವಾತಾವರಣ ಉಲ್ಲಾಸಮಯವಾಗುತ್ತದೆ.

ಇಂಗ್ಲೆಂಡಿನ ಹೆಸರಾಂತ ಇತಿಹಾಸಕಾರ ಹಾಗೂ ವಿಮರ್ಶಕ ಕಾರ್ಲೈಯಿಲ್ ಒಮ್ಮೆ ಪತ್ರಿಕೆಯಲ್ಲಿ ಈ ರೀತಿ ಜಾಹೀರಾತು ನೀಡಿದ:—ಕೆಲಸದವೇಳೆ ಗುಣುಗುಣಿಸುವ ಅಭ್ಯಾಸವುಳ್ಳ ಒಬ್ಬ ನೌಕರ ಬೇಕಾಗಿದ್ದಾನೆ. ಏಕೆಂದರೆ ಆ ಅವಧಿಯಲ್ಲೇ ಆತ ತುಂಬಾ ಚೆನ್ನಾಗಿ ಕೆಲಸಮಾಡುವ. ಸಂಗೀತದ ಲಯದಲ್ಲಿ ಮಗ್ನನಾದ ಆತನಿಗೆ ದಣಿವೇ ಉಂಟಾಗದು.

ಸ್ವಿಟ್ಜರ್ಲ್ಯಾಂಡಿನಲ್ಲಿ ಹಾಲುಕರೆಯುವ ಗೌಳಿಗರು ಗಾಯನ ಕಲೆಯಲ್ಲೂ ಪ್ರವೀಣರಿರುತ್ತಾರೆ. ಮಧುರಸ್ವರದ ಗೊಲ್ಲನಿಗೆ ಅಲ್ಲಿ ಸಂಬಳವೂ ಹೆಚ್ಚು ಸಿಗುತ್ತದೆ. ಏಕೆಂದರೆ ಇಂಪು ದನಿಗೆ ಮಾರು ಹೋಗಿ ಹಸುಗಳು ೨೦% ರಷ್ಟು ಹೆಚ್ಚು ಹಾಲು ಕೊಡುವುವಂತೆ. ಸಂಗೀತದಿಂದ ಕುರಿಗಳು ಹೆಚ್ಚು ಆರೋಗ್ಯವಂತವಾಗುವುವೆಂದು ಬುಫನ್ ಮಹಾಶಯರು ಹೇಳಿದ್ದಾರೆ. ನಮ್ಮಲ್ಲೂ ಗೃಹಿಣಿಯರು ಹಿಂದಿನ ಕಾಲದಲ್ಲಿ ಧಾನ್ಯ ಬೀಸುವ ವೇಳೆ ಲಕ್ಷಣವಾಗಿ ಹಾಡುತ್ತಿದ್ದರು. ಆಗ ಅವರಿಗೆ ದಣಿವಿನ ಅನುಭವವೇ ಆಗುತ್ತಿರಲಿಲ್ಲ.

ಕೆಲವರು ತಮ್ಮ ಸುತ್ತಮುತ್ತಲಿನ ವಾತಾವರಣವನ್ನು ಮಧುರಗೊಳಿಸುತ್ತಾರೆ. ಕೆಲವರು ತಮ್ಮ ಕೆಟ್ಟ ಸ್ವಭಾವದಿಂದ ಎಲ್ಲೆಡೆಯಲ್ಲೂ ಕಟುತನವನ್ನು ತುಂಬಿಸಿ ಬಿಡುತ್ತಾರೆ. ತಮ್ಮ ತಪ್ಪನ್ನರಿಯದೆ ಇಂತಹವರು ಇತರರನ್ನು ದೂರಿದರೆ ಫಲವೇನು?

(ಹಿಂದಿಯಿಂದ)

# ಇತಿಹಾಸದ ಮೇಲೆ ಹೊಸ ಬೆಳಕು

—ಎಚ್. ರೇವಣ್ಣಸಿದ್ದಯ್ಯ, ಇತಿಹಾಸ ಉಪನ್ಯಾಸಕರು, ಸಿದ್ಧಗಂಗಾ ಕಲಾ, ವಿಜ್ಞಾನ, ವಾಣಿಜ್ಯ ಕಾಲೇಜು, ತುಮಕೂರು.

ಹೆಸರು : ಶಿವಾಜಿ (1630–1680)

| | | | |
|---|---|---|---|
| ಬು 8 | ಶು 9 | 10 | ರಾ ಕು 11 |
| ರ ಗು 7 | 19 2-1630 ಕನ್ಯಾ ರಾಶಿ | | 12 |
| 6 | ಸಿಂಹಲಗ್ನ ಚಿತ್ತ ನಕ್ಷತ್ರ 2 | | ಲ 1 |
| ಕೇ 5 | 4 | ಶ 3 | ಚ 2 |

| | | | |
|---|---|---|---|
| – ಶ ಮೀನ | + ಕೇ ಮೇಷ | – ರ ವೃಷಭ | + ಮಿಥುನ |
| + ಕು ಕುಂಭ | ನವಾಂಶ | | – ಶು ಕರ್ಕ |
| – ಮಕರ | | | + ಸಿಂಹ |
| + ಲ ಗು ಧನಸ್ಸು | – ವೃಶ್ಚಿಕ | + ರಾ ತುಲಾ | – ಬು ಭ ಕನ್ಯಾ |

| | | |
|---|---|---|
| ರವಿದೆಸೆ | ರಾಹುದೆಸೆ 1634–52 | ಬುಧದೆಸೆ |
| ಚಂದ್ರದೆಸೆ | ಗುರುದೆಸೆ 1652–68 | ಕೇತುದೆಸೆ |
| ಕುಜದೆಸೆ 1630–34 | ಶನಿದೆಸೆ 1668–80 | ಶುಕ್ರದೆಸೆ |

**ಜನನ**:- ಶಿವಾಜಿಯು ಸಿಂಹಲಗ್ನದಲ್ಲಿ ಜನಿಸಿದ್ದನು ಸಿಂಹದಂಥ ಧೈರ್ಯವನ್ನು ಹೊಂದಿದ್ದನು. ನೈತಿಕ ಬಲವನ್ನು ಪಡೆದಿದ್ದನು ಸಾಹಸಿಯಾದನು. ಜನ್ಮರಾಶಿಯ ರವಿ ಶತ್ರು ರಾಶಿಯಲ್ಲಿದ್ದನು. ಶನಿಯ ಮನೆಯಾದ ಕುಂಭದಲ್ಲಿದ್ದನು. ಆದ್ದರಿಂದ ಹುಟ್ಟಿನಿಂದಲೇ ಶತ್ರುಗಳನ್ನು ಹೊಂದಿದ್ದನು.

ಔರಂಗಜೇಬನು ಕುಂಭ ಲಗ್ನದಲ್ಲಿ ಜನಿಸಿದ್ದನು. ಇದರಿಂದ ಇವರಿಬ್ಬರು ಆಜನ್ಮ ವೈರಿಗಳಾಗಿ ಪರಿಣಮಿಸಿದ್ದರು ರವಿಯೊಂದಿಗೆ ಗುರುವಿದ್ದುದರಿಂದ ದೈವ ಬಲ ಹೊಂದಿದ್ದನು.

**ಅನಕ್ಷರತೆ**:– ವಿದ್ಯಾ ಸ್ಥಾನವಾದ 4ನೇ ರಾಶಿ. ವೃಶ್ಚಿಕರಾಶಿ ಅಧಿಪತಿ ಕುಜ ವಿದ್ಯಾ ಕಾರಕನಲ್ಲಿ ಆ ಕುಜ ಮಿಥುನ ರಾಶಿಯಲ್ಲಿದ್ದನು. ಜೊತೆಗೆ ರಾಹು ವಿದ್ದುದರಿಂದ ವಿದ್ಯಾಭ್ಯಾಸದಲ್ಲಿ ಆಸಕ್ತಿ ಉಂಟಾಗಲಿಲ್ಲ. ಇದರಿಂದ ಶಿವಾಜಿ ಅನಕ್ಷರಸ್ಥನಾಗಿ ಉಳಿದನು. ಆದರೆ 4ನೇ ಕುಜ ವಾಯುರಾಶಿಯಲ್ಲಿ, ಬುಧನ ರಾಶಿಯಲ್ಲಿದ್ದುದರಿಂದ ವಿಶೇಷಬುದ್ಧಿ ಹೊಂದಿದ್ದನು.

**ಜಾಗೀರು ರಾಜ್ಯ :–** ಭೂ ಒಡೆತನದ ರಾಶಿ 4 ರಲ್ಲಿ ಅಂದರೆ ವೃಶ್ಚಿಕದಲ್ಲಿ ಕುಜನಿಲ್ಲ. ಆ ಕುಜ ಲಾಭ ಸ್ಥಾನದಲ್ಲಿ, 11 ರಲ್ಲಿದ್ದನು. ಜೊತೆಗೆ ರಾಹು ಸಂಪರ್ಕವಿತ್ತು. ಉಚ್ಚತ್ವ ಹೊಂದಿದ್ದರಿಂದ ಜಾಗೀರು, ರಾಜ್ಯ ಸಂಬಂಧವಾಗಿ ವೃದ್ಧಿ ಅದರಲ್ಲಿ ಏರುಪೇರು ಆಗುತ್ತಿತ್ತು.

**ಯುದ್ಧಗಳು ಸುಲಿಗೆಗಳು:-** 6ನೇ ಯದು ಮಕರರಾಶಿ. ಶತೃಗಳನ್ನು ಸೂಚಿಸುತ್ತದೆ ಆ ಶನಿ ತುಲಾದಲ್ಲಿ ಉಚ್ಚನಾಗಿದ್ದಾನೆ. ಮೊಗಲ್ ಚಕ್ರವರ್ತಿ ಅತ್ಯಂತ ಪ್ರಬಲನಾಗಿದ್ದ ಶತೃವಾಗಿದ್ದನು. 6ನೇ ರಾಶಿಗೆ ಕುಜನ ದೃಷ್ಟಿ ಇತ್ತು. ಕುಜನು ಲಗ್ನರಾಶಿಯು ರವಿಯ ಮಿತ್ರ ಶನಿಯ ರಾಶಿಯಾದ 7ರಲ್ಲಿ ರವಿ ಇದ್ದುದರಿಂದ ಶನಿಯ ವಿರುದ್ಧ ಹೋರಾಟ ನಿರಂತರವಾಗಿ ನಡೆಯಿತು. ಕುಜನು ಲಾಭ ಸ್ಥಾನದಲ್ಲಿ ಇದ್ದುದರಿಂದ ಆ ಯುದ್ಧಗಳಿಂದ ಅಪಾರ ಸುಲಿಗೆಗಳಿಂದ ಲಾಭ ಸಂಪಾದಿಸಲು ಕಾರಣವಾಯಿತು.

ಶಿವಜಿಯು ಹಿಂದೂ ರಾಜ್ಯಗಳ ಮೇಲೂ, ಪಾಳೆಪಟ್ಟುಗಳ, ನಗರಗಳ ಬಂದರು ಮೇಲೆ ದಾಳಿಮಾಡಿ ರಾಜ್ಯ ವಿಸ್ತರಣೆಯಲ್ಲಿ ತೊಡಗಿ ಲೂಟಿಯಲ್ಲಿ ಚೌದ್ಧಾಯಿ, ಸರ್ ದೇಶ್‌ಮುಖಿ ಎಂಬ ಎರಡು ಬಗೆಯ ಕಪ್ಪಗಳನ್ನು ವಸೂಲು ಮಾಡುತ್ತಿದ್ದನು. ಏಕೆಂದರೆ ಸ್ವಧರ್ಮೀಯರನ್ನು ಹಿಂದೂಗಳನ್ನು ಸೂಚಿಸುವ ಚಂದ್ರ ಧನ ರಾಶಿಯಲ್ಲಿ ಅಂದರೆ 2ರಲ್ಲಿದ್ದು, ಕುಜನದೃಷ್ಟಿಗೆ ಒಳಗಾಗಿದ್ದನು. ಹೀಗೆ ಧನಾದಿಪಟು ಚಂದ್ರನು ಕಾರಣವಾದದು ಶಿವಾಜಿಯ ಕಡೆಯಿಂದಲೂ ಮೊಗಲರ ಕಡೆಯಿಂದಲೂ ಲೂಟಿಗಳಿಗೆ ಗುರಿಯಾದುದ್ದು ಕಂಡುಬರುತ್ತದೆ. ಶನಿಯು ಮತ್ತು ಕುಜರ ಮಧ್ಯೆ ಚಂದ್ರಸಿರುವುದನ್ನು ಗಮನಿಸಿದರೆ ಇದಕ್ಕೆ ಉತ್ತರ ದೊರೆಯುತ್ತದೆ.

ಚಂದ್ರನಿಂದ 2 ರಲ್ಲಿ ಶನಿ ಉಚ್ಚನಾಗಿದ್ದು ಅಕ್ರಮದಿಂದ ಅನ್ಯಾಯದಿಂದ, ದೌರ್ಜನ್ಯದಿಂದ ಧನಾರ್ಜನೆಗೆ ಕಾರಣನಾಗಿದ್ದನು. ಚಂದ್ರನಿಂದ ಧನಾಧಿಪತಿ ಶುಕ್ರನು ಕುಜನರಾಶಿಯಾದ ಮೇಷದಿಂದ 2ನೇ ಸ್ಥಾನವನ್ನು ನೋಡುತ್ತಿದ್ದು, ಶನಿಯು ಮಿತ್ರನಾಗಿದ್ದು ಈ ಯುದ್ಧಗಳಿಗೆ ಸುಲಿಗೆಗಳಿಗೆ ಬೆಂಬಲ ಕೊಟ್ಟನು ರಾಹು-ಕೇತುಗಳ ಉಚ್ಚರಾಶಿಗಳಲ್ಲಿದ್ದು ಅಪಾರ ಸಂಪತ್ತನ್ನು ಗಳಿಸಿ ಕೊಡಲು ಕಾರಣರಾದರು.

**ಸ್ವರಾಜ್ಯ ಸ್ವಧರ್ಮ ರಕ್ಷಣೆ:-** ಶಿವಾಜಿಯ ಜನ್ಮರಾಶಿಯು ರವಿ ಗುರುವಿನೊಂದಿಗೆ ಇದ್ದುದರಿಂದ ಸ್ವರಾಜ್ಯ ಸ್ಥಾಪನೆಗೆ ಸ್ವಧರ್ಮ ರಕ್ಷಣೆಯಲ್ಲಿ ಶಿವಾಜಿ ಯಶಸ್ವಿಯಾದನು.

9ನೇ ರಾಶಿ ಧರ್ಮದರಾಶಿ, ಭಾಗ್ಯದರಾಶಿ ಅಲ್ಲಿ ಶುಕ್ರನಿದ್ದನು. ಆ ಶುಕ್ರನು ಯುದ್ಧಕಾರಕ, ಯುದ್ಧಪ್ರಿಯ ಕುಜನ ರಾಶಿಯಾದ ಮೇಷದಲ್ಲಿದ್ದನು. ಶುಕ್ರನು ಸ್ತ್ರೀ ದೇವತೆಯನ್ನು ಸೂಚಿಸುತ್ತಾನೆ. ಯುದ್ಧದೇವತೆ ದುರ್ಗಾಭವಾನಿಯ ಪರಮ ಆರಾದಕನು ಕೊಲ್ಲಾಪುರದ ಭವಾನಿಯ ಕೃಪೆಗೆ ಶಿವಾಜಿ ಪಾತ್ರನಾಗಿದ್ದನು

ಧರ್ಮಕಾರಕರು ರವಿಯೊಂದಿಗೆ ಇದ್ದುದರಿಂದ ಶಿವಾಜಿ ಪರಧರ್ಮ ಸಹಿಷ್ಣುವಾಗಿದ್ದನು. ಯುದ್ಧಕಾಲದಲ್ಲಿ ದೊರೆತ ಪವಿತ್ರ ಖುರಾನಿನ ಪ್ರತಿಗಳನ್ನು ಗೌರವದಿಂದ ಮುಸ್ಲಿಮ ಮಿತ್ರರಿಗೆ ಕೊಟ್ಟಿದ್ದನು



ಹೆಸರು : ಶಿವಾಜಿ

(ಮುಂದುವರೆದದು)

| | | | |
|---|---|---|---|
| ಬುಧ 8 | ಶುಕ್ರ 9 | | ಕುಜ ರಾಹು |
| ರವಿ ಗುರು 7 | ರಾಶಿ | | |
| | ನಕ್ಷತ್ರ | | ಲಗ್ನ |
| ಕೇತು | | ಶನಿ | ಚಂದ್ರ |

| | | | |
|---|---|---|---|
| − ಮೀನ | + ಮೇಷ | − ವೃಷಭ | + ಮಿಥುನ |
| + ಕುಂಭ | ನವಾಂಶ | | − ಕರ್ಕ |
| − ಮಕರ | | | + ಸಿಂಹ |
| + ಧನಸ್ಸು | − ವೃಶ್ಚಿಕ | + ತುಲಾ | − ಕನ್ಯಾ |

| | | |
|---|---|---|
| ರವಿದೆಸೆ | ರಾಹುದೆಸೆ | ಬುಧದೆಸೆ |
| ಚಂದ್ರದೆಸೆ | ಗುರುದೆಸೆ | ಕೇತುದೆಸೆ |
| ಕುಜದೆಸೆ | ಶನಿದೆಸೆ | ಶುಕ್ರದೆಸೆ |

**ಕೋಟೆ, ಕೊತ್ತಲುಗಳ ನಿವಾಸ:–** ಶಿವಾಜಿಯು ತನ್ನ ಹೆಚ್ಚು ಕಾಲವನ್ನು ಕಾಡು ಮೇಡುಗಳಲ್ಲಿ ಕೋಟೆ ಕೊತ್ತಲಗಳಲ್ಲಿ ಸೆರೆಮನೆಯಲ್ಲಿ ಕಳೆದನು ಭವ್ಯವಾದ ಅರಮನೆಗಳನ್ನಾಗಿ, ಮಹಲುಗಳನ್ನಾಗಿ ಕಟ್ಟಿಸಲಾಗಲಿಲ್ಲ ಏಕೆಂದರೆ ಲಗ್ನದಿಂದ 4ನೇ ರಾಶಿ ವೃಶ್ಚಿಕ ಅದು ಕುಜನರಾಶಿ. ಆ ಕುಜ ರಾಹು ಕೇತುಗಳ ಅಶುಭ ಸಂಬಂಧ ಹೊಂದಿದ್ದನು ಆದ್ದರಿಂದ ಕಷ್ಟಕರವಾಗಿ, ದುರ್ಗಮವಾಗಿ, ರಹಸ್ಯವಾದ ಸ್ಥಳಗಳಲ್ಲಿ ಅವನು ಜೀವಿಸಬೇಕಾಯಿತು. 4ನೇ ರಾಶಿ ಕೇತು-ಶನಿಗಳ ಅಶುಭ ಗ್ರಹಗಳ ಮಧ್ಯವಿದ್ದು ಕೋಟೆ ಕೊತ್ತಲುಗಳಲ್ಲಿ, ಕಾಡುಮೇಡುಗಳಲ್ಲಿ 'ಬೆಟ್ಟದ ಇಲಿ' ಯಂತೆ ಇರಬೇಕಾಯಿತು.

**ಬಹು ಪತ್ನಿಯರು:-** 7ನೇ ರಾಶಿ ಪತ್ನಿಯರನ್ನು ಸೂಚಿಸುತ್ತದೆ. ಕುಂಭರಾಶಿ 7ನೇ ರಾಶಿ. ಅದರ ಅಧಿಪತಿ ಶನಿಯು ತುಲಾರಾಶಿಯಲ್ಲಿ ಉಚ್ಚನಾಗಿದ್ದನು. ಆದ್ದರಿಂದ ಶಿವಾಜಿಯ ಐದು ಪತ್ನಿಯರನ್ನು ಮದುವೆಯಾಗಿದ್ದನು 7ನೇರಾಶಿಗೆ ಶನಿಯ ಸಂಬಂಧವಿದ್ದು ಪತ್ನಿಯರು ಶತೃರಾಶಿಯ ಸಿಂಹಲಗ್ನದ ಶಿವಾಜಿಗೆ ಅನುಕೂಲಕರ ದಾಂಪತ್ಯವಿರಲಿಲ್ಲ.

**ಪುತ್ರರು:–**5ನೇ ರಾಶಿ ಪುತ್ರರಿಗೆ ಸಂತಾನಕ್ಕೆ ಸಂಬಂಧಿಸಿದ್ದು. ಆ ರಾಶಿಯಲ್ಲಿ ಕೇತುವಿದ್ದು, ಅದಕ್ಕೆ ರಾಹು ಮತ್ತು ಕುಜನ ದೃಷ್ಟಿಯಿತ್ತು. 5ನೇ ರಾಶಿ ಗುರುವಿನ ಧನುರ್ ರಾಶಿಯಾಗಿದ್ದು. ಆ ಗುರು ರವಿಯೊಂದಿಗೆ ಶನಿಯ ಕುಂಭ ರಾಶಿಯಲ್ಲಿದ್ದನು. ಹೀಗೆ ರಾಹು, ಕೇತು, ಕುಜ ಮೊದಲಾದ ಅಶುಭ ಗ್ರಹಗಳು. ಶುಭ ಗ್ರಹವಾದ ಗುರು ಕ್ರೂರ ಗ್ರಹವಾದ ರವಿಗಳ ಮಿಶ್ರ ಸಂಬಂಧಗಳಿಂದ ಅಶುಭ ಫಲಗಳೇ ಪ್ರಬಲವಾಗಿ ಶಿವಾಜಿಯ ಮಕ್ಕಳು ಪ್ರಬಲರಾಗಲಿಲ್ಲ. ಸಾಂಬಾಜಿ ಸಾಹು ಮೊದಲಾದವರು ಪರಸ್ಪರ ದ್ವೇಷಿಗಳಾಗಿ ಮರಾಠಾ ರಾಜ್ಯದ ದುರವಸ್ಥೆಗೆ ಕಾರಣರಾದರು.

# ನಡತೆಗಾಗಿ ಶಿಕ್ಷಣ

ಕೆ. ಎಸ್. ರಾಜಶೇಖರಯ್ಯ, ಉಪನ್ಯಾಸಕರು, ಎಸ್. ಆರ್. ಪಿ. ಡಬ್ಲ್ಯು ಕಾಲೇಜು,
ಹೊಸದುರ್ಗ ರೋಡ್-577554, ಚಿತ್ರದುರ್ಗ ಜಿಲ್ಲೆ.

ವ್ಯಕ್ತಿಯ ಸರ್ವತೋಮುಖ ವಿಕಾಸಕ್ಕೆ ಪೂರಕವಾಗಿರುವ ಅನೇಕ ಶೈಕ್ಷಣಿಕ ಗುರಿಗಳಲ್ಲಿ ಚಾರಿತ್ರ್ಯಕ್ಕಾಗಿ ಅಥವಾ ನಡತೆಗಾಗಿ ಶಿಕ್ಷಣದ ಗುರಿಯು ಅಷ್ಟೇ ಮುಖ್ಯವಾದುದಾಗಿದೆ. ಏಕೆಂದರೆ ನಡತೆ ಒಂದು ಆದರ್ಶ ಜೀವನದ ಮೌಲ್ಯ. ಮಾನವರೆಲ್ಲರೂ ಅಳವಡಿಸಿಕೊಳ್ಳಬೇಕಾದ ಶ್ರೇಷ್ಠ ಸದ್ಗುಣ. ಸತ್ಯ, ಅಹಿಂಸೆ, ನೀತಿ, ತ್ಯಾಗ, ಪ್ರೀತಿ, ಸದಾಚಾರಗಳು ಶೀಲದ ವ್ಯಾಪ್ತಿಯಲ್ಲಿ ಬರುತ್ತವೆ. ಆದರೆ ನಡತೆ ಸರಿಯಿಲ್ಲದಿದ್ದಲ್ಲಿ ವ್ಯಕ್ತಿಗಳಿಸಿದ ಜ್ಞಾನಕ್ಕೆ, ಸಂಪತ್ತಿಗೆ ಬೆಲೆ ಇಲ್ಲ. ಉತ್ತಮ ನಡತೆ ಇಲ್ಲದ ವ್ಯಕ್ತಿ ಚಾರಿತ್ರ್ಯಹೀನನಾಗುತ್ತಾನೆ. ಅಂತಹವನು ಪಶುವಿಗೆ ಸಮಾನ. ನಡತೆಯೇ ವ್ಯಕ್ತಿತ್ವದ ಜೀವಾಳ. ಹೀಗಾಗಿ ಚಾರಿತ್ರ್ಯವು ಪ್ರತಿ ವ್ಯಕ್ತಿಗೂ ಅತ್ಯಮೂಲ್ಯವಾದುದು.

ಚಾರಿತ್ರ್ಯ ಎಂದರೇನು ? ಎಂಬ ಪ್ರಶ್ನೆಗೆ ಪ್ರತಿಯೊಬ್ಬನ ವರ್ತನೆ, ಮಾತು-ಕೃತಿ, ರುಚಿ-ಅಭಿರುಚಿ, ಶಿಸ್ತು, ಆಸಕ್ತಿ, ನೈತಿಕ ಪ್ರಜ್ಞೆ, ಸಮಯ ಪ್ರಜ್ಞೆ, ಸಂಸ್ಕೃತಿ, ಪ್ರಾಮಾಣಿಕತೆ, ತಾಳ್ಮೆ, ನಂಬಿಕೆ, ನ್ಯಾಯ, ಅನುಕಂಪ, ವಿಧೇಯತೆ...... ಮುಂತಾದ ಗುಣಗಳು ನಮಗೆ ಇಚ್ಛಿಸಿದರೆ, ಆಗ ಆ ವ್ಯಕ್ತಿ ಉತ್ತಮ ನಡತೆವುಳ್ಳವನೆಂದೂ, ಅವನಲ್ಲಿ ಕ್ರೌರ್ಯ ದ್ವೇಷ, ಅಸೂಯೆ, ಸ್ವಾರ್ಥ, ಮುಂತಾದ ದುರ್ಗುಣಗಳು ಕಂಡು ಬಂದರೆ ಅಂತಹವನನ್ನು ಚಾರಿತ್ರ್ಯ ಹೀನ ಎಂದು ಕರೆಯುತ್ತೇವೆ. ಇಂತಹ ವ್ಯಕ್ತಿಗಳೊಡನೆ ಯಾರೂ ಅಷ್ಟು ಸುಲಭವಾಗಿ ಬೆರೆಯಲು, ಸ್ನೇಹ ಬೆಳೆಸಲು ಇಚ್ಛಿಸುವುದಿಲ್ಲ, ಅರಿಸ್ಟಾಟಲ್ ಹೇಳುವಂತೆ ಚಾರಿತ್ರ್ಯವು ಮನುಷ್ಯನಿಗೆ ಅತ್ಯಮೂಲ್ಯವಾದುದು. ಅದು ಜೀವನಿಗೆ ಮುಕುಟ ಪ್ರಾಯವಿದ್ದಂತೆ. ಚಾರಿತ್ರ್ಯವಿಹೀನನ ಬಾಳು ವ್ಯರ್ಥ. ಅಂತಹ ವ್ಯಕ್ತಿಯ ಜೀವನ ಪಶುವಿನ ಜೀವನಕ್ಕೆ ಸಮಾನ. ಚಾರಿತ್ರ್ಯವನ್ನು ಕುರಿತು ಇಂಗ್ಲೀಷಿನ ಉಕ್ತಿಯೊಂದು ತುಂಬಾ ಮಾರ್ಮಿಕವಾಗಿ ಬಣ್ಣಿಸುತ್ತದೆ.—ಸಂಪತ್ತು ಕಳೆದುಕೊಂಡರೆ ಏನೂ ನಷ್ಟವಿಲ್ಲ. ಆರೋಗ್ಯ ಕಳೆದು ಕೊಂಡರೆ ಸ್ವಲ್ಪ ಕಳೆದು ಕೊಂಡಂತೆ. ಆದರೆ ಚಾರಿತ್ರ್ಯ ಕಳೆದು ಕೊಂಡರೆ ಸರ್ವಸ್ವವನ್ನು ಕಳೆದು ಕೊಂಡತೆ ( If wealth is lost nothing is lost, if health is lost some thing is lost· but if character is lost every thing is lost·) ಆದ್ದರಿಂದ ಎಲ್ಲರೂ ಹೆಜ್ಜೆ ಹೆಜ್ಜೆಗೂ ತಮ್ಮ ನಡತೆಯ ಕಡೆಗೆ ಗಮನ ನೀಡಬೇಕು ಒಂದು ವೇಳೆ, ತನ್ನಲ್ಲಿ ತಪ್ಪುಕಂಡು ಬಂದರೆ ಆಗ ಆ ತಪ್ಪುಗಳನ್ನು ತಿದ್ದಿಕೊಳ್ಳಲು ಪ್ರಾಮಾಣಿಕವಾಗಿ ಪ್ರಯತ್ನಿಸ ಬೇಕೇ ವಿನಃ ಸದಾ ಮತ್ತೊಬ್ಬರ ತಪ್ಪುಗಳನ್ನು

ಹುಡುಕಬಾರದು. ನಮ್ಮನ್ನು ನಾವು ಅರಿಯ ಬೇಕು ಎಂದು ಬಸವಣ್ಣನವರು ಹೀಗೆ ಹೇಳುತ್ತಾರೆ.

“ ಲೋಕದ ಡೊಂಕು ನೀವೇಕೆ ತಿದ್ದುವಿರಿ
ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ”

ಹಾಗೆಯೇ ಸಿದ್ದಯ್ಯ ಪುರಾಣಿಕರೂ ಸಹ “ ಬಾಳ ಬಂಡಿಗೆ ಬುದ್ದಿ ಭಾವಗಳೆರಡು ಗಾಲಿಗಳು, ಶೀಲವೇ ಕೀಲವಯ್ಯ ” ಎನ್ನುತ್ತಾರೆ.

ಡಾ|| ಜಾಕೀರ್ ಹುಸೇನರು “ ವ್ಯಕ್ತಿ ತನ್ನ ನಡತೆಯಮೂಲಕ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುವಂತಾಗಬೇಕು ” ಎನ್ನುತ್ತಾರೆ. ಗಾಂಧೀಜಿಯವರ ದೃಷ್ಟಿಯಲ್ಲಿ ಚಾರಿತ್ರ್ಯನಿರ್ಮಾಣ ಎಂದರೆ ಮಕ್ಕಳಲ್ಲಿ ಧೈರ್ಯ, ಸ್ಥೈರ್ಯ, ಸಾಮರ್ಥ್ಯ, ಸದ್ಗುಣ ಹಾಗೂ ಕ್ಷಮಾಗುಣ ಮುಂತಾದವುಗಳನ್ನು ಬೆಳೆಸುವುದೇ ಆಗಿದೆ. ಬರ್ಟೆಂಡ್ ರಸಲರು – ಶಿಕ್ಷಣದಿಂದ ಮಕ್ಕಳಲ್ಲಿ ವಿವೇಕವು ಸ್ಫುಟಗೊಳ್ಳಬೇಕು ಎಂದಿದ್ದಾರೆ. ಜಾನ್‌ಡ್ಯೂಯಿ ಅವರು ಚಾರಿತ್ರ್ಯ ಹುಟ್ಟುಗುಣಅಲ್ಲ. ಅದು ಗಳಿಸಿದ ಗುಣ ಎಂದರೆ ರೇಮಂಟ್ ಅವರು ಮಾನವನ ಗುಣಗಳನ್ನು ತಿದ್ದಿ ರೂಪಿಸುವಂತಹುದೇ ಶಿಕ್ಷಣ ಆಗಿರುವುದರಿಂದ ಶಿಕ್ಷಕರು-ಪಾಲಕರು ಮಕ್ಕಳಲ್ಲಿ ಒಳ್ಳೆಯ ಆದರ್ಶಗಳನ್ನು, ಉತ್ತಮ ಚಿಂತನೆ, ಆಲೋಚನೆ, ವಿವೇಚನೆ, ನಡೆ-ನುಡಿ ರುಚಿ–ಅಭಿರುಚಿ, ಆಸಕ್ತಿಯನ್ನು ಬೆಳೆಸುವತ್ತ ಗಮನ ನೀಡಬೇಕು. ಶಾಲಾ ಪಠ್ಯವಸ್ತುವಿನಲ್ಲಿ ನೈತಿಕ ಶಿಕ್ಷಣಕ್ಕೆ ಮಹತ್ವ ನೀಡಬೇಕು. ಶಿಕ್ಷಕರು ತಮ್ಮ ಬೋಧನೆಯ ಮೂಲಕ ಇತಿಹಾಸ ಪ್ರಸಿದ್ಧ ರಾಜಮಹಾರಾಜರ, ಧಾರ್ಮಿಕ ಹಾಗೂ ಸಮಾಜ ಸುಧಾರಕರ, ಸ್ವಾತಂತ್ರ್ಯ ಹೋರಾಟಗಾರರ ವ್ಯಕ್ತಿಗಳ ಬದುಕಿನ ವಿವಿಧ ಮುಖಗಳನ್ನು ಪರಿಚಯ ಮಾಡಿ-ಕೊಡಬೇಕು ಅವರುಗಳ ಆದರ್ಶವನ್ನು ಅನುಕರಿಸುವಂತೆ ಮಾರ್ಗದರ್ಶನ ಮಾಡ-ಬೇಕು. ಹಾಗೂ ಅವರಿಗೆ ಆದರ್ಶ ಹಾಗೂ ಅನುಕರಣಾ ಯೋಗ್ಯರಾಗಿರಬೇಕು. ಆಗ ಮಾತ್ರ ಸದ್ಗುಣ ಸಂಪನ್ನ ವ್ಯಕ್ತಿಗಳ ನಿರ್ಮಾಣ ಸಾಧ್ಯ.

ಇತ್ತೀಚಿನ ದಿನಗಳಲ್ಲಿ ದೇಶದ ಹಾಗೂ ವಿಶ್ವದ ವಿದ್ಯಮಾನಗಳನ್ನು ಗಮ-ನಿಸಿದರೆ ಎಲ್ಲೆಡೆ ಚಾರಿತ್ರ್ಯವಧೆ, ಮಾನಾಪಹರಣ, ಕೊಲೆ, ದರೋಡೆ, ಮೋಸ, ವಂಚನೆ, ಲೂಟಿ, ಭ್ರಷ್ಟಾಚಾರ, ದೌರ್ಜನ್ಯ, ಬಾಂಬ್ ಆಸ್ಫೋಟ............ ಹೆಚ್ಚು ಇಡೀ ರಾಷ್ಟ್ರದ, ವಿಶ್ವದ ನೆಮ್ಮದಿಯ ಶಾಂತ ಜೀವನಕ್ಕೆ ಭಂಗ ಬಂದಿದೆ. ಆದ್ದರಿಂದ ಜನಸಾಮಾನ್ಯರಿಗೆ ಸಾಮಾನ್ಯ ನೈತಿಕ ಪ್ರಜ್ಞೆ ಇಲ್ಲದಿದ್ದಲ್ಲಿ ಸಾಮಾಜಿಕ ಜೀವನ ಸುರಕ್ಷಿತತವಾಗಿರಲಾರದು.



ಸಮಾಜದ ಘಟಕವಾದ ವ್ಯಕ್ತಿಗಳು ಚಾರಿತ್ರ್ಯವಂತರಾಗದೆ ಹೋದರೆ ಸಾಮಾಜಿಕ ನಡತೆ ಹೇಗೆ ತಾನೇ ಬೆಳದೀತು? Charity must begin at home ಎಂಬಂತೆ ಮಕ್ಕಳ ನಡತೆ-ಚಾರಿತ್ರ್ಯದ ಬಗ್ಗೆ ಮನೆ ಹೆಚ್ಚು ಕಾಳಜಿ ವಹಿಸಬೇಕು. ಜೊತೆಗೆ ಉತ್ತಮ ಚಾರಿತ್ರ್ಯವನ್ನು ರೂಪಿಸುವ, ಯೋಗ್ಯ ವ್ಯಕ್ತಿ-ಗಳನ್ನು, ನಾಗರಿಕರನ್ನು ನಿರ್ಮಾಣ ಮಾಡುವುದರ ಮೂಲಕ ಶಿಸ್ತು, ಸಹನೆ, ಗೌರವ, ಸಹಕಾರ, ರಾಷ್ಟ್ರ–ವಿಶ್ವಪ್ರೇಮವನ್ನು ಬೆಳೆಸುವಂತಹ ಶಿಕ್ಷಣ ಇಂದು ಅಗತ್ಯ ವಾಗಿದೆ. ಧರ್ಮ–ಧರ್ಮಗಳ ಬಗ್ಗೆ ಸೌಹಾರ್ಧತೆಯನ್ನು ಮೂಡಿಸುವಂತಹ ಶಿಕ್ಷಣ ಅಗತ್ಯವಾಗಿದೆ. ಧರ್ಮಗಳು ಬೇರೆ ಬೇರೆ ಆದರೂ ಆ ಎಲ್ಲಾ ಧರ್ಮಗಳ ಗುರಿ ಇದೇ ಮನುಕುಲದ ಉದ್ಧಾರ ಎಂಬ ಅರಿವನ್ನು ಶ್ರೀಸಾಮಾನ್ಯರಲ್ಲಿ ಮೂಡಿಸ ಬೇಕಾಗಿದೆ. ಆದರೆ ವ್ಯಕ್ತಿಗಳು ಇಂದು ಆಯಾ ಧರ್ಮಗಳ ತಿರುಳನ್ನು ಸರಿಯಾಗಿ ಅರ್ಥಮಾಡಿ ಕೊಳ್ಳದಿರುವುದರಿಂದಲೇ ಅನರ್ಥಗಳು ಹೆಚ್ಚುತ್ತಿರುವುದನ್ನು ಕುರಿತು ಕವಿ ಸಿದ್ಧಯ್ಯ ಪುರಾಣಿಕರು ಹೀಗೆ ಉಚ್ಚರಿಸುತ್ತಾರೆ.

ಹಿಂದು ಮುಸ್ಲಿಮನೆ ಆಗು
ಬೌದ್ಧ ಕ್ರೈಸ್ತನೇ ಆಗು
ಚಾರ್ವಾಕನೇ ಆಗು
ಭೋಗ ಬಯಸಿ
ಏನಾದರೂ ಆಗು
ಹಾರೈಸಿದಂತಾಗು
ಏನಾದರೂ ಸರಿಯೇ
ಮೊದಲು ಮಾನವನಾಗು.

ಸಮಾಜದಲ್ಲಿ ನ್ಯಾಯ ನೀತಿಗಳು ಇರವುದೇಕೆಂದರೆ ಪರಸ್ಪರ ಬದುಕಿನಲ್ಲಿ ವ್ಯವಹರಿಸುವುದಕ್ಕೆ, ಜೀವನದ ಮೌಲ್ಯಗಳನ್ನು ಪೂರ್ಣವಾಗಿ ಅರ್ಥಮಾಡಿಕೊಳ್ಳು ವುದಕ್ಕೆ. ಅದಕ್ಕಾಗಿ ನಮ್ಮ ಜೀವನ ಹಿತವಾಗಲು ನಿಯಮ ಪಾಲನೆ ಮಾಡುವಂತಹ ನಡತೆ ಬೇಕು' ನಡತೆ ಸರಿ ಇಲ್ಲದ ಬದುಕು ಬದುಕಲ್ಲ. ಸ್ವಾರ್ಥದ ಬದುಕನ್ನು ಎಲ್ಲಾ ಪಶು-ಪ್ರಾಣಿಗಳು ಮಾಡುತ್ತವೆ. ಅವುಗಳಿಗೆ ಪಾಪದ ಕಲ್ಪನೆಯಿಲ್ಲ. ಹೃದಯ ದಲ್ಲಿ ಭಾವನೆಗಳಿಲ್ಲ. ಭಾವನೆಗಳನ್ನು ಹೊಂದಿರುವ ಮನುಷ್ಯ ಪಶುವಿನಂತೆ ವರ್ತಿ ಸುವುದನ್ನು ಕುರಿತು ಸಿದ್ಧಯ್ಯ ಪುರಾಣಿಕರು ತಮ್ಮ ವಚನದಲ್ಲಿ ಮತ್ತೆ ಹೀಗೆ ಹೇಳುತ್ತಾರೆ.

ವಿದ್ಯೆ ಬಂತು, ವಿನಯ ಹೋಯ್ತು
ಬುದ್ಧಿ ಬಂತು, ಶ್ರದ್ಧೆ ಹೋಯ್ತು
ಶ್ರದ್ಧೆ ಬಂತು, ವಿವೇಚನೆ ಹೋಯ್ತು

ವಿಜ್ಞಾನ ಬಂತು, ಸಮಾಧಾನ ಹೋಯ್ತು
ಶರೀರಕ್ಕೆ ಸ್ವಾಸ್ಥ್ಯ ಬಂತು, ಚಿತ್ತ ಸ್ವಾಸ್ಥ್ಯ ಹೋಯ್ತು
ದೀರ್ಘಾಯುಷ್ಯ ಬಂತು, ಜೀವನ ಸ್ವಾರಸ್ಯ ಹೋಯ್ತು
ಮಾತು ಬಂತು, ಕೃತಿಯು ಹೋಯ್ತು
ಜಾತಿ ಬಂತು, ಪ್ರೀತಿ ಹೋಯ್ತು
ಸ್ವಾತಂತ್ರ್ಯ ಬಂತು, ಸೌಜನ್ಯ ಹೋಯ್ತು
ಸಂಮೃದ್ಧಿ ಬಂತು, ಸಂಸ್ಕೃತಿ ಹೋಯ್ತು

ಮಹಾಭಾರತದಲ್ಲಿ ಹೇಳಿದಂತೆ ಒಬ್ಬ ವ್ಯಕ್ತಿ ನಡತೆಯಿಂದಲೇ ಆರ್ಯನೆನಿಸುವನು. ಹೀಗಿರುವುದರಿಂದಲೇ ಶ್ರೀಗಂಧದ ಸುವಾಸನೆಗೂ ಮಿಗಿಲು ನಡತೆ. ಜಾಜಿಪರಿಮಳಕ್ಕೂ ಮಿಗಿಲು ನಡತೆ. ಕಮಲದ ಚೆಲುವಿಗೂ ಮಿಗಿಲು ನಡತೆ. ವಿದ್ಯೆಗೂ ಮಿಗಿಲು ನಡತೆ. ನಡತೆ ಸರಿಇಲ್ಲದ ವ್ಯಕ್ತಿ ಎಷ್ಟು ಓದಿದರೇನು? ಎಷ್ಟು ರೂಪ, ಪಾಂಡಿತ್ಯ-ಐಶ್ವರ್ಯ ವಂತನಾದರೇನು ? ನಡತೆ ಇಲ್ಲದವನ ಬದುಕು ವಾಸನೆ ಇಲ್ಲದ ಹೂವಿನ ಹಾಗೆ. ನುಡಿಗೆ ತಕ್ಕ ನಡತೆ ಬೇಕು. ಆಗ ಮಾತ್ರ ವ್ಯಕ್ತಿ ಸುಸಂಸ್ಕೃತನಾಗಬಲ್ಲನು. ನಡತೆ ಇಲ್ಲದ ವಿದ್ಯೆ ಕೇವಲ ಅವಿದ್ಯೆ. ಆದ್ದರಿಂದಲೇ ನಡತೆಯೇ ನಾಣ್ಯ ಎಂದು ಪೂರ್ವಿಕರು ಹೇಳುತ್ತಾರೆ. ನಡತೆಯನ್ನು ಪಾಲಿಸುವಲ್ಲಿ ಸ್ತ್ರೀ-ಪುರುಷ ಎಂಬ ತಾರತಮ್ಯ ಯಾವ ರೀತಿಯಲ್ಲೂ ಇಲ್ಲ.

ಒಟ್ಟಿನಲ್ಲಿ, ಇಂದು ದ್ವಂದ್ವಗಳ ಸುಳಿಯಲ್ಲಿ ಸಿಲುಕಿ ಬದುಕುತ್ತಿರುವಂತಹ ವ್ಯಕ್ತಿ ತನ್ನ ನಡತೆಯನ್ನು ಅರ್ಥಮಾಡಿಕೊಂಡು ಇತರರಿಗೆ ಒಳಿತು ಮಾಡುವ ಚೈತನ್ಯ ಇಲ್ಲದಿದ್ದರೂ ಕೆಟ್ಟದ್ದನ್ನು ಮಾಡದೆ ಒಳ್ಳೆಯ ಸದ್ಗುಣಗಳನ್ನು ಬೆಳೆಸಿಕೊಂಡರೆ ರಾಷ್ಟ್ರಕ್ಕೂ ಹಿತ, ಸಮಾಜಕ್ಕೂ ಹಿತ ಎಂಬುದನ್ನು ಎಲ್ಲರೂ ಮನಗಾಣ ಬೇಕಾಗಿರುವುದು ಅಗತ್ಯ.

# ಪ್ರಾಚೀನ ಕರ್ನಾಟಕದ ಬೌದ್ಧಕ್ಷೇತ್ರ - ಸನ್ನತಿ

— ಡಾ: ವಿ.ಜಿ. ಪೂಜಾರ, ರೀಡರ್ ಕನ್ನಡ ಅಧ್ಯಯ ಸಂಸ್ಥೆ, ಗುಲ್ಬರ್ಗ ವಿಶ್ವವಿದ್ಯಾಲಯ
ಗುಲ್ಬರ್ಗ–585106

ಕರ್ನಾಟಕದ ಉತ್ತರ ತುದಿಯಲ್ಲಿರುವ ಈಗಿನ ಹೈದ್ರಾಬಾದ್ ಕರ್ನಾಟಕ ಪ್ರದೇಶ ಐತಿಹಾಸಿಕ ಹಾಗೂ ಸಾಂಸ್ಕೃತಿಕ ದೃಷ್ಟಿಯಿಂದ ತುಂಬ ಗಮನಾರ್ಹವಾದುದು. ಜೈನರ ಕಾವ್ಯದ, ಶರಣರ ವಚನದ, ದಾಸರ ಹಾಡಿನ ಬೀಡಾದ ಈ ಪ್ರದೇಶವು ಶಿಲ್ಪಕಲೆ, ಶಾಸನ, ಐತಿಹ್ಯ, ವಿದ್ಯಾಕೇಂದ್ರ ಹಾಗೂ ಧಾರ್ಮಿಕ ಕೇಂದ್ರಗಳಿಗೆ ಹೆಸರುವಾಸಿಯಾಗಿತ್ತು. ರಾಷ್ಟ್ರಕೂಟ ದೊರೆ ನೃಪತುಂಗನ ರಾಜಧಾನಿ ಮಳಖೇಡ ಇದ್ದುದು ಈ ಪ್ರದೇಶದ ಗುಲಬರ್ಗಾ ಜಿಲ್ಲೆಯಲ್ಲಿಯೇ. ಇದೇ ಜಿಲ್ಲೆಯಲ್ಲಿದ್ದ ನಾಗಾಯಿ ಮತ್ತು ಸನ್ನತಿ ಪ್ರಾಚೀನ ಕಾಲದಲ್ಲಿ ತುಂಬ ಪ್ರಸಿದ್ಧ ಪಡೆದಿದ್ದ ಘಟಿಕಾಸ್ಥಾನ ಹಾಗೂ ಬೌದ್ಧ ಕೇಂದ್ರಗಳಾಗಿದ್ದವು.

'ಸನ್ನತಿ' ಗುಲಬರ್ಗಾ ಜಿಲ್ಲೆಯ ಚಿತ್ತಾಪುರ ತಾಲ್ಲೂಕಿನಲ್ಲಿರುವ ಒಂದು ಸಣ್ಣ ಗ್ರಾಮ. ಇದು ಗುಲಬರ್ಗಾದಿಂದ 80 ಕಿಲೋಮೀಟರ್ ದೂರದಲ್ಲಿದ್ದು, ಭೀಮಾ ನದಿಯ ಎಡ ದಡದಲ್ಲಿದೆ. ಈ ಗ್ರಾಮ ಕ್ರಿಸ್ತಶಕದ ಮೊದಲ ಅಥವಾ ಎರಡನೇ ಶತಕದಲ್ಲಿ ಬೆಳವಣಿಗೆಗೊಂಡ ಒಂದು ದೊಡ್ಡ ಬೌದ್ಧಕೇಂದ್ರವಾಗಿತ್ತು. ಆಗ ಕರ್ನಾಟಕದಲ್ಲಿದ್ದ ಬೌದ್ಧಕೇಂದ್ರಗಳೆಂದರೆ ಎರಡೇ. ಇದೊಂದು, ಇನ್ನೊಂದು ಬನವಾಸಿ. ಆಗ ಕರ್ನಾಟಕವನ್ನು ಶಾತವಾಹನರು ಆಳುತ್ತಿದ್ದರು. ಇವರು ಬೌದ್ಧ ಪರ ನಿಲುವು ಉಳ್ಳವರಾಗಿದ್ದು, ಬೌದ್ಧ ಧರ್ಮವನ್ನು ಪುನಃ ನಮ್ಮ ದೇಶದಲ್ಲಿ ಪ್ರಚಾರಮಾಡುವ ಉದ್ದೇಶ ಹೊಂದಿದ್ದರು. ಸನ್ನತಿಯನ್ನು ಇವರು ತಮ್ಮ ಆಡಳಿತದ ಕೇಂದ್ರ ಸ್ಥಾನ ಮಾಡಿಕೊಂಡಿದ್ದರು. ಇದನ್ನು ಇವರು ಬೌದ್ಧ ಪರಂಪರೆಯ ಮಹಾಯಾನ ಶಾಖೆಯ ಆರಾಧನಾ ಕೇಂದ್ರವಾಗಿ ಬೆಳೆಸಿದರು.

ಕ್ರಿ.ಶ.ಪೂರ್ವ 1 ನೇ ಶತಮಾನದಿಂದ 3 ನೇ ಶತಮಾನದೊಳಗಾಗಿ ಸನ್ನತಿ ಜೀರ್ಣಾವಸ್ಥೆಗೆ ಬಂದಂತಿದೆ. ಇಲ್ಲಿ ಇಂದು ಬೌದ್ಧ ಧರ್ಮದ ಅನೇಕ ಸ್ಮಾರಕಗಳು, ಅವಶೇಷಗಳು ಬನವಾಸಿಗಿಂತಲೂ ಹೆಚ್ಚಾಗಿ ಸಿಗುತ್ತವೆ. ಈ ಊರ ಮುಂದೆ ಹರಿಯುತ್ತಿರುವ ಭೀಮಾ ನದಿಯ ಎರಡೂ ದಂಡೆಗಳುದ್ದಕ್ಕೂ 2, 3 ಮೈಲುಗಳವರಿಗೆ ಅಂದರೆ ಕಣಗನಹಳ್ಳಿಯವರೆಗೂ ಬೌದ್ಧ ಸ್ಮಾರಕಗಳು ಚೆಲ್ಲಿ ಕೊಂಡುದ್ದನ್ನು ಕಾಣಬಹುದು.

ಸನ್ನತಿಯಲ್ಲಿ ಎರಡು ಬೌದ್ಧ ಸ್ತೂಪಗಳಿದ್ದುವು ಎಂಬ ಉಲ್ಲೇಖವಿದ್ದರೂ ಒಂದು ಮಾತ್ರ ಈಗ ಉಪಲಬ್ಧವಾಗಿದೆ. ಇದರಲ್ಲಿಸ್ಥಾಪಿಸಿರಬಹುದಾದ ಪವಿತ್ರ ಅಸ್ಥಿಗಳಿಗೆ ಮೀಸಲಾಗಿದ್ದ ಕಲ್ಲಿನ ಕರಂಡಕವೂ ಸಿಕ್ಕಿದೆ ಬುದ್ಧನ ಜನನ, ಪರಿಷ್ಕ್ರಮಣ, ಸಂಭೋಧಿ, ಧರ್ಮ ಪ್ರವಚನ, ಮತ್ತು ನಿರ್ವಾಣಗಳೆಂಬ 5 ಘಟನೆಗಳನ್ನು



ಸಂಕೇತಿಸುವ 5 ಆಯಕಸ್ಥಂಬಗಳು ದೊರೆತಿವೆ. ಇವುಗಳಲ್ಲಿ ಬುದ್ಧನ ಅನುಯಾಯಿಗಳ ಕೆತ್ತನೆಯೂ ಇದೆ. ಇಲ್ಲಿ ನೂರಕ್ಕಿಂತ ಹೆಚ್ಚು ಶಿಲ್ಪಕಲಾಕೃತಿಗಳು ಸಿಕ್ಕಿವೆ. ಇವೆಲ್ಲ ಅಲ್ಲಿಯೇ ಸ್ಥಳೀಯವಾಗಿ ಸಿಕ್ಕುವ ಸುಣ್ಣದ ಕಲ್ಲನಲ್ಲಿ ಕಟೆಯಲ್ಪಟ್ಟಿದ್ದು, ಬುದ್ಧ ಜಾತಕ ಕಥೆಗಳು ಹಾಗೂ ಆತನ ಜೀನವನ್ನು ಸಾಂಕೇತಿಕವಾಗಿ ಒಳಗೊಂಡ ಕಲಾಕೃತಿಗಳಾಗಿವೆ. ಇವು ಆಂಧ್ರದ ಅಮರಾವತಿಯಲ್ಲಿರುವ ಸಾಂಪ್ರದಾಯಿಕ ಕಲಾಕೃತಿಗಳಂತೆ ಇರದೆ, ಇಲ್ಲಿನ ಸ್ಥಳೀಯ ಜಾನಪದ ಶೈಲಿಯನ್ನು ಒಳಗೊಂಡಿದೆ. ಸ್ತೂಪವಲ್ಲದೆ ಬುದ್ಧನ ಪಾದ, ಬೋಧಿ ಗಿಡ, ತ್ರೀರತ್ನ ಇತ್ಯಾದಿ ಚಿತ್ರಗಳು ಕಲ್ಲುಚಪ್ಪಡಿ, ರಿಲಿಕ್ ಕ್ಯಾಸ್ಕೆಟ್ ಸ್ಮಾರಕ, ಕೋಟೆಗೋಡೆ ಮುಂತಾದವು ಸಿಕ್ಕಿದ್ದು, ಇವೆಲ್ಲ ಶಾತವಾಹನರ ಕಾಲಕ್ಕೆ ಸಂಬಂಧಿಸಿದವು ಎಂದು ಗುರುತಿಸಲಾಗಿದೆ.

ಬೌದ್ಧ ವಾಸ್ತುವಿನಲ್ಲಿ ವೈಶಿಷ್ಟ್ಯ ಪೂರ್ಣವೆನ್ನಿಸುವ ಯಕ್ಷ ವಿಗ್ರಹವೂ (ಸ್ಥೂಲೋದರ, ಕಟಿವಸ್ತು, ಕುಬ್ಜಾಕಾರ ಇಲ್ಲಿ ದೊರೆತಿದೆ. ಚಂದ್ರಲಾಂಬಅಥವಾ ಚಂದ್ರಲಾ ಪರಮೇಶ್ವರಿ ದೇವಾಲಯವು ಇಲ್ಲಿಯೇ ನದಿಯ ದಂಡೆಯ ಮೇಲಿದೆ. ಈ ದೇವಾಲಯವು ಬೌದ್ಧರ ಕಾಲದಲ್ಲಿ ಬೌದ್ಧರ ಸ್ಥಾನವಾಹಿಯೂ, ಶೈವ-ಶಾಕ್ತರ ಕಾಲದಲ್ಲಿ ಪಾರ್ವತಿ-ಮಹಾಕಾಳಿಯ ಸ್ಥಾನವಾಗಿಯೂ ವೈಷ್ಣವರಿಗೆ ಶ್ರೀರಾಮ-ಸರಸ್ವತಿಯ ಸ್ಥಾನವಾಗಿಯೂ ಮಾರ್ಪಾಟು ಹೊಂದುತ್ತ ಬಂದುದನ್ನರಿಯಬಹುದು. ಈಗ ಇದೊಂದು. ಯಾತ್ರಾ ಸ್ಥಳವಾಗಿದೆ.

ಸನ್ನತಿಯಲ್ಲಿ ಪ್ರಾಚೀನ ಕಾಲದ ಗಾಂಡು, ಮಣಿ, ನಾಣ್ಯ ಹಾಗೂ ಶಾಸನಗಳು ಸಿಕ್ಕಿವೆ. ಸದ್ಯ ಐವತ್ತಕ್ಕೂ ಹೆಚ್ಚು ಶಾಸನಗಳು ಸಿಕ್ಕಿದ್ದು ಇವೆಲ್ಲ ಪ್ರಾಕೃತ ಭಾಷೆಯಲ್ಲಿದ್ದು, ಬ್ರಾಹ್ಮಿ ಲಿಪಿಯಲ್ಲಿ ಬರೆಯಲ್ಪಟ್ಟಿವೆ. ಒಂದೋ ಅಥವಾ ಎರಡೋ ಸಾಲುಗಳನ್ನೊಳಗೊಂಡ ಇವುಗಳಲ್ಲಿ ಬೌದ್ಧ ಸಂಘಾರಾಮಗಳಿಗೆ, ಸ್ತೂಪ ವಿಹಾರಗಳಿಗೆ ದಾನವಿತ್ತ ವಿವರಗಳಿವೆ. ಕೆಲ ಶಾಸಗಳಲ್ಲಿ ಸಾಮಾನ್ಯ ಜನರೂ ಕೂಡ ಬೌದ್ಧ ಧರ್ಮಾವಲಂಭಿಗಳಾಗಿದ್ದುದರ ಉಲ್ಲೇಖವಿದೆ ಅನೇಕ ಸ್ತ್ರೀಯರು ಪುರುಷರಿಗೆ ಸಮಾನವಾಗಿ ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಮುಕ್ತವಾಗಿ ಭಾಗವಹಿಸಿದ್ದು ಇವುಗಳಲ್ಲಿ ಉಲ್ಲೇಖಗೊಂಡಿದೆ. ಕೆಲವು ಮರಣ ಶಾಸನಗಳೂ ಇವೆ. ಈಗ ಇವುಗಳಲ್ಲಿ ಕೆಲವನ್ನು ರಾಜ್ಯ ಸರ್ಕಾರದ ಗುಲಬರ್ಗಾ ವಸ್ತು ಸಂಗ್ರಹಾಲಯದಲ್ಲಿ ಇರಿಸಲಾಗಿದೆ. ಭಾರತೀಯ ಶಾಸನಗಳ ವಾರ್ಷಿಕ ವರದಿಗಳಲ್ಲಿ (1966-67 ಹಾಗೂ 1968-69) ಇವನ್ನು ದಾಖಲಿಸಲಾಗಿದೆ. ಲಿಪಿ ಶಾಸ್ತ್ರದ ದೃಷ್ಟಿಯಿಂದ ಇವುಗಳ ಕಾಲವನ್ನು ಕ್ರಿ.ಶ. 2 ನೇ ಶತಮಾನವೆಂದು ಗುರುತಿಸಲಾಗಿದೆ.

ಬೌದ್ಧ ಧರ್ಮದ ಅವಶೇಷಗಳು ಹಾಗೂ ಬುದ್ಧನ ಜೀವನಕ್ಕೆ ಸಂಬಂಧಿಸಿದ ಅಮೂಲ್ಯ ಸ್ಮಾರಕಗಳನ್ನು ಒಳಗೊಂಡ ಸನ್ನತಿಯು ಇಂದು ಸಂಶೋಧಕರಿಗೆ, ಇತಿಹಾಸತಜ್ಞರಿಗೆ ತುಂಬಿದ ಗಣಿಯಾಗಿದೆ; ಕನ್ಯನೆಲವಾಗಿದೆ. ಒಟ್ಟನಲ್ಲಿ, ಸನ್ನತಿಯು ನಮ್ಮ ರಾಜ್ಯದ ಅನೇಕ ಶಿಲ್ಪಕಲೆಯ ಹೆಮ್ಮೆಯ ನೆಲೆಗಳಲ್ಲಿ ಒಂದಾಗಿದೆ.

ಸೌಜನ್ಯ: ಕನ್ನಡ ವಿಶ್ವವಿದ್ಯಾಲಯ - ಹಂಪಿ.

# ಕನ್ನಡಿಗರು ಮತ್ತು ಕನ್ನಡಾಭಿಮಾನ

ಡಾ॥ ಸಂಜೀವಶೇಟ್ಟಿ ಮುಖ್ಯಸ್ಥರು, ಕನ್ನಡ ವಿಭಾಗ, ಕೆ. ಜೆ. ಸೋಮಯ್ಯ
ಕಲಾ ಮತ್ತು ವಾಣಿಜ್ಯ ಕಾಲೇಜ್, ವಿದ್ಯಾ ವಿಹಾರ್ (ಪೂ) ಮುಂಬಯಿ 400077

ಸಮಗ್ರ ಕನ್ನಡ ನಾಡು ನುಡಿಯ ಸರ್ವತೋಮುಖ ಅಭಿವೃದ್ಧಿಗೆ ಕಾಯಾವಾಚಾ ಮನಸಾ ಸಮರ್ಪಣಭಾವದಿಂದ ಅಹರ್ನಿಶಿ ಕನ್ನಡದ ಕೆಲಸದಲ್ಲಿ ಸದಭಿಮಾನದಿಂದ ಕರ್ತವ್ಯ ನಿಷ್ಠರಾಗಿ ಪ್ರಾಮಾಣಿಕವಾಗಿ ತೊಡಗಿದ್ದ ಇಂದು ಅಮರ ಚೇತನರೆನಿಸಿರುವ ವಿಭೂತಿ ಪುರುಷರು, ಮಹಾನ್ ಚೇತನರು ದಾರ್ಶನಿಕರು, ರಾಜರು, ರಾಜಕಾರಣಿಗಳು ವಿಭಿನ್ನ ಕ್ಷೇತ್ರಗಳಲ್ಲಿಯ ಕನ್ನಡದ ಕೆಲಸಗಾರರು, ಸಾಹಿತಿಕಲಾವಿದರು, ಕವಿಗಳು ಪ್ರಾತಃ ಸ್ಮರಣೀಯರಾಗಿರುವರೆಂಬುದು ಐತಿಹಾಸಿಕ ಸತ್ಯ ; ಅವರ ತ್ಯಾಗ ಬಲಿದಾನ ಹೋರಾಟಗಳ ಪ್ರತಿಫಲವೇ ಇಂದಿನ ಕರ್ನಾಟಕದ ಏಕೀಕೃತ ಸ್ವರೂಪ : ಅಖಂಡ ಕರ್ನಾಟಕ : ಇನ್ನೂ ಅಚ್ಚ ಕನ್ನಡ ಪ್ರದೇಶಗಳು ಪರಕೀಯವಾಗಿರುವುದು ಕನ್ನಡಿಗರ ದೌರ್ಬಲ್ಯ; ಕನ್ನಡಿಗರಲ್ಲಿಯ ದೌರ್ಬಲ್ಯಗಳೇ ಕನ್ನಡಿಗರ ಪಾಲಿಗೆ ಸಮಸ್ಯೆಗಳನ್ನುಂಟು ಮಾಡಿವೆಯೆಂಬುದು ತರ್ಕಾತೀತ. ವಿಷಮತೆಗಳ ನಡುವೆಯೂ ಕೆಚ್ಚೆದೆಯಿಂದ ಕನ್ನಡ ನಾಡುನುಡಿಗಾಗಿ ಜೀವನವನ್ನೇ ತೆತ್ತ ಕನ್ನಡ ಸುಪುತ್ರರ ಕಾಯಕಗಳನ್ನು ಅರಿತಾಗ ಅಭಿಮಾನದ ಜ್ಯೋತಿ ಅಂತರಂಗದಲ್ಲಿ ಪ್ರಜ್ವಲಿಸುವಂತಿದೆ. ಅವರುಗಳು ಉರಿಸಿರುವ ನಂದಾ ದೀಪಗಳ ಬೆಳಕಿನಲ್ಲಿ ಕನ್ನಡದ ಎಂಟೆದೆಯ ಬಂಟರಾಗಿ, ಬಲ್ಲವರಾಗಿ ಬಾಳುವ ಕನ್ನಡ ಪ್ರಜ್ಞೆಯ ಕನ್ನಡಿಗರಾಗಿ ಬಾಳುವ ಪ್ರಜ್ಞೆ ಪ್ರತಿಯೊಬ್ಬ ಕನ್ನಡಿಗನಲ್ಲಿರಬೇಕು.

ಕವಿರಾಜಮಾರ್ಗಕಾರನು " ಸುಭಟರ್ಕಳ್, ಕವಿಗಳ್, ಸುಪ್ರಭುಗಳ್ ಚೆಲ್ವರ್ಕಳಭಿಜನರ್ಕಳ್ ಗುಣಿಗಳ್ ಅಭಿಮಾನಿಗಳತ್ಯುಗ್ರರ ಗಭೀರಚಿತ್ತರ ವಿವೇಕಿಗಳ್ ನಾಡವರ್ಗಳ್ " ಎಂದು ಸಾವಿರ ವರ್ಷಗಳ ಹಿಂದೆ, ಮುಕ್ತಕಂಠದಿಂದ ಹಾಡಿ ಅಂದಿನ ಕನ್ನಡಿಗರ ವ್ಯಕ್ತಿತ್ವದ ವಿವಿಧ ಮುಖಗಳನ್ನು ಎತ್ತಿ ತೋರಿಸುವಲ್ಲಿ, ಗುಣಗಾನ ಮಾಡಿರುವ ರೀತಿ, ಅಭಿಮಾನಾಸ್ಪದವಾದುದು, ಆ ಹಿರಿಯರ ಗೊಮ್ಮಟ ವ್ಯಕ್ತಿತ್ವದ ಹಿರಿಮೆಯೊಡನೆ ದಿವ್ಯವೂ ಭವ್ಯವೂ ಆದರ್ಶವೆನಿಸುವಂತೆ ಅಭಿವ್ಯಕ್ತಿಗೊಂಡಿರುವ ಉಕ್ತಿಗಳು ಕನ್ನಡಿಗರಿಗೆ ಸರ್ವಕಾಲಿಕ ಅಮರ ಸಂದೇಶದ ನುಡಿಮುತ್ತುಗಳಾಗಿವೆ.

ಕನ್ನಡನಾಡು " ಕಾವೇರಿಯಿಂದ ಗೋದಾವರಿ " ವರೆಗೆ ಹರಡಿತ್ತು. ಆದರೆ ಈ ವಿಸ್ತೀರ್ಣತೆ ಮುಂದೇಕೆ ಕ್ಷೀಣಿಸಿತು ? ಐತಿಹಾಸಿಕ ಕರ್ನಾಟಕದ ಭೂಪ್ರದೇಶಗಳನ್ನು ಪ್ರಸ್ತುತ ಕರ್ನಾಟಕದ ನೆಲದ ವಿಸ್ತಾರವನ್ನು ಗಮನಿಸಿದಾಗ ಕರ್ನಾಟಕ ಕಳಕೊಂಡ ಮಣ್ಣಿನಂಶದರಿವು ಕನ್ನಡದ ಮಣ್ಣಿನ ಮಕ್ಕಳಿಗೆ ತಿಳಿಯದೇ ಹೋದೀತೆ ?

ಕನ್ನಡಿಗರಲ್ಲಿಯ ಭಾಷಾಭಿಮಾನವೇ ಕನ್ನಡ ನಾಡಿನ ವಿಸ್ತೀರ್ಣತೆಯನ್ನು ಕಳೆದು ಕೊಳ್ಳುವಂತೆ ಮಾಡಿದೆ ಎನ್ನುವುದನ್ನು ಪ್ರಾಮಾಣಿಕವಾಗಿ ಅರ್ಥಮಾಡಿಕೊಳ್ಳ ಬಹುದಾಗಿದೆ.

ತಾಯ್ನುಡಿಯ ಬಗ್ಗೆ ಮನದುಂಬಿ ಝೇಂಕರಿಸಿದ ಆತ್ಮಾಭಿಮಾನದ ಕವಿವ-ರೇಣ್ಯರ ಸಹಸ್ರಾರು ದೀಪಗಳ ನಂದಾದೀಪಗಳಂತೆ ಬೆಳಗುತ್ತಿರುವುದು, ಕನ್ನಡದ ಭಾಗ್ಯ. ಅಂತೆಯೇ " ಕನ್ನಡಂ ಕತ್ತುರಿಯಲ್ತೆ "…. " ಮರಿದುಂಬಿಯಾಗಿ ಮೇಣ್ ಕೋಗಿಲೆಯಾಗಿ ಪುಟ್ಟುವುದು ನಂದನದೋಳ್ ವನವಾಸಿದೇಶದೊಳ್". "ಕರ್ನಾಟಕ ಎಂಬುದು ಬರಿಯ ಹೆಸರಲ್ಲ, ಮಂತ್ರಕಣಾ, ಶಕ್ತಿಕಣಾ, ದೇವಿಕಣಾ". "ತಾಯೆ ಬಾರ ಮೊಗ ತೋರ ಕನ್ನಡಿಗರ ಮಾತೆಯೆ, ಹರಸು ತಾಯೆ ಸುತರ ಕಾಯೆ ನಮ್ಮ ಜನ್ಮದಾತೆಯೆ, " " ನನ್ನದು ಈ ಕನ್ನಡ ನಾಡು " " ಅದು ನನ್ನನೆಂತೊ ಹಾಗೆಯೇ ನಿನ್ನದೋ " " ಒಂದೇ ಒಂದೇ ಒಂದೇ ಕರ್ನಾಟಕ ಒಂದೇ ಇಲ್ಲಿಯ ಜನಮನ ಭಾಷೆಯು ಕನ್ನಡವದು ಒಂದೇ ಒಂದೇ ಜನವೂ ಮನವೂ ಕನ್ನಡಿಗಳು ಎಂದೇ, ಕುಲ ವೊಂದೇ ಸ್ಥಲವೊಂದೇ ನೀತಿಯನೆಲವೊಂದೇ, ಹೀಗೆನ್ನದ ಹೆರವರು ಅವರಿದ್ದರು ಒಂದೇ, ಇರದಿದ್ದರುಒಂದೇ " " ಎಲ್ಲಾದರೂ ಇರು, ಎಂತಾದರೂ ಇರು, ಎಂದೆಂದಿಗೂ ನೀ ಕನ್ನಡವಾಗಿರು" ಎಂದು ಕನ್ನಡದ ದೀಕ್ಷೆ ತೊಡುವಂತೆ ಸಾರಿದ ಕವಿವಾಣಿಗಳ ಅಮೃತ ಸಂದೇಶಗಳಾಗಿವೆ; ಉಸಿರಿನಷ್ಟೇ ಸಾಕ್ಷಿಯಾಗಿರಬಲ್ಲ ಅಂತರಂಗದ ಧ್ವನಿಗಳಾಗಿವೆ; ಕನ್ನಡದ ಮಂತ್ರಘೋಷಗಳಾಗಿವೆ.

**ಸೌಜನ್ಯ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೫೮೩೨೧೧**



## ದಕ್ಷಿಣ ಕನ್ನಡ ಜಿಲ್ಲೆಯ ಮೊತ್ತಮೊದಲ
# ವೀರಶೈವ ಕನ್ನಡ ಕವಿ: ಸೋಮರಾಜ


ವೈ. ಉಮಾನಾಥ ಶೆಣೈ, ಇತಿಹಾಸ ಉಪನ್ಯಾಸಕ, ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಉಜಿರೆ-574240,


ಕರಾವಳಿ ಕರ್ನಾಟಕದ ನಿಸರ್ಗರಮ್ಯ ಪ್ರಾಕೃತಿಕ ಸೌಂದರ್ಯವೂ ಪಶ್ಚಿಮದಲ್ಲಿ ಭೋರ್ಗರೆದು ಭಾವನಾ ತರಂಗಗಳನ್ನೆಬ್ಬಿಸುವ ಸಮುದ್ರವೂ ಇಲ್ಲಿಯ ಜನರಲ್ಲಿ ಪ್ರತಿಭೆಯನ್ನು ಬೆಳೆಸುವುದಲ್ಲದೆ ಕಾವ್ಯರಚನೆಗೆ ಬೇಕಾದ ಸ್ಫೂರ್ತಿಯನ್ನೂ ಒದಗಿಸು-ತ್ತಿದ್ದವು. ಪೂರ್ವದಲ್ಲಿ ಹರಡಿರುವ ನಿರ್ಗಮ್ಯ ಪಶ್ಚಿಮ ಘಟ್ಟಗಳು ಪರದೇಶದ ಶತ್ರುಗಳ ಧಾಳಿಗಳನ್ನು ತಡೆಯುತ್ತಿದುದರಿಂದ ಕರ್ನಾಟಕದ ಈ ನೆಲದಲ್ಲಿ ಶಾಂತಿ, ಅಹಿಂಸೆ, ಸಾಮರಸ್ಯ, ಸ್ವಧರ್ಮಪ್ರೀತಿ ಹಾಗೂ ಸಾಹಿತ್ಯ ಸಂಸ್ಕೃತಿಗಳ ಮೇಲೆ ಪ್ರೀತಿಗಳು ಸಹಜವಾಗಿ ಬೆಳೆದಿದ್ದವು ಇಲ್ಲಿ ಸಿಕ್ಕಿದ ರಾಜಾಶ್ರಯವೂ ಹೆಚ್ಚಿನ ಸಾಹಿತ್ಯ ಬೆಳವಣಿಗೆಗೆ ಪೂರಕವಾಗಿತ್ತು. ತುಳುಭಾಷೆಯು ಜನಸಾಮಾನ್ಯರ ಹಾಗೂ ವ್ಯವಹಾರದ ಭಾಷೆಯಾಗಿದ್ದರೂ ಇಲ್ಲಿ ಕನ್ನಡವು ಬಹಳ ಉನ್ನತ ಮಟ್ಟದಲ್ಲಿ ಬೆಳೆದುದು ಹಾಗೂ ಸಾಹಿತ್ಯ ಸೃಷ್ಟಿಯಾದುದು ಇತಿಹಾಸದ ಒಂದು ವಿಶೇಷವಾದ ಸತ್ಯ. ಪ್ರಾಯಶಃ ಇದರಿಂದಾಗಿಯೇ ಇದನ್ನು ದಕ್ಷಿಣಕನ್ನಡ ಜಿಲ್ಲೆ ಎಂದು ಕರೆಯಲಾಗುತ್ತದೆ.

ಈ ಜಿಲ್ಲೆಯ ಪ್ರಸಿದ್ಧರಾದ ರತ್ನಾಕರವರ್ಣಿ, ಶಾಂತಿಕೀರ್ತಿ ಮುನಿ ಮಹೇಂದ್ರ ಪದ್ಮನಾಭ, ಚಂದ್ರಶೇಖರ, ಕವಿ ಚಂದ್ರಮ ಮೊದಲಾದ ಈವರೆಗೆ ಬೆಳಕಿಗೆ ಬಂದಿರುವ ಕನ್ನಡ ಕವಿಗಳೆಲ್ಲರೂ ಜೈನಕವಿಗಳು. ಆದರೆ ಸಂಶೋಧನೆಯ ಪರಿಣಾಮ ವಾಗಿ ಬೆಳಕಿಗೆ ಬಂದಿರುವ ಸೋಮರಾಜನೆಂಬ ಕವಿಯು ಮಾತ್ರ ವೀರಶೈವ ಮತ ದವನು. ಈತನು ಇಲ್ಲಿಯ ಮೊತ್ತಮೊದಲ ಕನ್ನಡ ಕವಿಯೂ ಹೌದು. ಇದು ಈ ವೀರಶೈವ ಕವಿಯ ವೈಶಿಷ್ಟ್ಯ, ಈತನ ಕಾವ್ಯ ಉದ್ಭಟ ಕಾವ್ಯ ಎಂಬ ಹೆಸರಿನದು. ಪ್ರಸಿದ್ಧವಾದ ವೀರಶೈವ ಭಕ್ತನೊಬ್ಬನ ಜೀವನ ಸಾಧನೆಗಳನ್ನು ವರ್ಣಿಸುವಂತಹದು.

ಈತನು ಉದ್ಭಟ ಕಾವ್ಯದ ಅಧ್ಯಯನದಿಂದ ತಿಳಿದು ಬರುವಂತೆ ಈತನುಚೌಡ ಎಂಬ ಅರಸು ಮನೆತನಕ್ಕೆ ಸೇರಿದ ರಾಜಕುಮಾರ. ತನ್ನ ಕಾವ್ಯದ ಪ್ರಾರಂಭದ 14ನೇ ಪದ್ಯದಲ್ಲಿ ಹೇಳಿರುವಂತೆ.

ಬಿಸಜಾರಾತಿಕುಲೋದ್ಭವಂ, ತಿರುಮಲಕ್ಷೋಣೀಧರಂ ತನ್ನರೇಂ।
ದ್ರ ಸುಪುತ್ರಂ ಸುತರಾಯಣೋರ್ವಿಪತಿ ತದ್ರಾಜನ್ಯ ರಾಯಣ್ಣನಂದನಂ॥
ವಸುಧೇಶೋತ್ತಮ ಇಂದುಶೇಖರ ನೃಪಂತತ್ಪೂಜಪಂ ಸೋಮನೊಲುಸಿದೀರ
ಸತ್ಕೃತಿ

ಆದುದರಿಂದ ಚಂದ್ರವಂಶದ ತಿರುಮಲ ಚೌಟನ ಬಳಿಕ ಆಳಿದ ಆತನ ಮಗ ರಾಯಣಚೌಟ ಅನಂತರ ಪಟ್ಟವೇರಿದ ಇಂದುಶೇಖರ ಮಹಾರಾಜನ ಮಗನೆ, ಈ ಕವಿ ಸೋಮರಾಜ. ಈ ಚಂದ್ರವಂಶದ ಚೌಟ ಅರಸರು ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ಬಳಿಯ ಉಲ್ಲಾಳ ಎಂಬಲ್ಲಿಂದ ಕ್ರಿ. ಶ. 1160 ರಿಂದ ರಾಜ್ಯವಾಳಿದುದು ನಮಗೆ ಇತಿಹಾಸದಿಂದ ತಿಳಿಯುತ್ತದೆ. ಇವರು ಮುಂದೆ ಮೂಡುಬಿದ್ರೆಯ ಬಳಿಯ ಪುತ್ತಿಗೆಯಿಂದ ರಾಜ್ಯವಾಳಿದ್ದರು. ಹಾಗೂ ಇಲ್ಲಿಯ ಜಗತ್ಪ್ರಸಿದ್ಧ ಸಾವಿರ ಕಂಬದ ಬಸದಿಯ ನಿರ್ಮಾಣಕ್ಕೂ ಕಾರಣರಾಗಿದ್ದರು.

ಕವಿ ಸೋಮರಾಜನೇ ಹೇಳಿಕೊಂಡಿರುವಂತೆ "... ಶಾಲೀ ವಾಹನ ಶಕಾಬ್ದ ಮದೆಯ್ದೆ ಸಾಸಿರದ ನೂರಿಂ ಸಂದ ನಾಲ್ವತ್ತು ನಾ। ಲ್ಕನೆಯ ರಂಜಿತ ಚಿತ್ರಭಾನು ...." ಸಂವತ್ಸರದಲ್ಲಿ ಅಂದರೆ ಕಿ. ಶ 1222ರಲ್ಲಿ ತನ್ನ ಕಾವ್ಯವನ್ನು ರಚಿಸಿದ್ದನು. ಈ ಕಾಲಕ್ಕೆ ಚೌಟ ಅರಸರು ತಮ್ಮ ಅರಮನೆಯನ್ನು ಮೂಡುಬಿದ್ರೆಯ ಬಳಿಯ ಪುತ್ತಿಗೆಗೆ ವರ್ಗಾಯಿಸಿದ್ದುದರಿಂದ ಈ ಕಾವ್ಯವು ಪುತ್ತಿಗೆಯಲ್ಲೇ ರಚಿಸಲ್ಪಟ್ಟಿತ್ತು ಎಂದು ಹೇಳಬೇಕಾಗುತ್ತದೆ.

ಸೋಮರಾಜ ಕವಿಯು ವೀರಶೈವನಾಗಿದ್ದುದರಿಂದ ತನ್ನ ಗುರು ಜಂಗಮ ಸಂಪ್ರದಾಯದಲ್ಲಿ ಪ್ರಸಿದ್ಧನಾದ ಅಲ್ಲಮಪ್ರಭುವೆಂದು ಹೇಳಿಕೊಂಡಿದ್ದಾನೆ. ಜಂಗಮ ಗುರುಗಳ ಪಾದಸೇವೆಯಿಂದ ತಾನು ವಿದ್ವಾಂಸನಾಗಿದ್ದುದರಿಂದ ತನಗೆ ಪರಮಜ್ಞಾನಿ ಮತ್ತು ವರವಾಣಿ ಎಂಬ ಎರಡು ಬಿರುದುಗಳಿದ್ದತೆ ಹೇಳಿಕೊಂಡಿದ್ದಾನೆ. ಗ್ರಂಥಾರಂಭದಲ್ಲಿ ವಿರೂಪಾಕ್ಷನನ್ನು ಸ್ತುತಿಸಿದ್ದಾನೆ. ಆ ಬಳಿಕ ಅಂಬಿಕೆಯನ್ನೂ, ಗಣಪತಿಯನ್ನೂ, ಷಣ್ಮುಖನನ್ನೂ, ಬಸವೇಶ್ವರಾದಿ ಪರಮ ಶಿವಭಕ್ತರನ್ನೂ ಪೂರ್ವಕವಿಗಳಾದ ಹರಿಹರ ಮತ್ತು ಪಾಲ್ಕುರಿಕೆ ಸೋಮನಾಥನನ್ನೂ ಸ್ಮರಿಸಿರುವನು. ತನ್ನ ಕಾವ್ಯವನ್ನು ಉದ್ಭಟ ಕಾವ್ಯವೆಂಬ ಹೆಸರಿನಿಂದ ಮಾತ್ರವಲ್ಲದೆ ಶೃಂಗಾರಸಾರಂ ಎಂದೂ ಕರೆದಿರುವನು, ತಾನು ಶಾಸ್ತ್ರಿಯೂ ಅಲ್ಲ, ಪಂಡಿತನೂ ಅಲ್ಲ, ವಾಗ್ಮಿಯೂ ಅಲ್ಲ. ಆದುದರಿಂದ ಸಿಟ್ಟುಗೊಳ್ಳದೆ ಸಂಪ್ರೀತಿಯಿಂದ ತನ್ನ ಕಾವ್ಯವನ್ನು ಆದರಿಸಬೇಕೆಂದು ವಿನಮ್ರವಾಗಿ ಪ್ರಾರಂಭದಲ್ಲೇ ಪ್ರಾರ್ಥಿಸಿಕೊಂಡಿರುವನು.

ಈತನ ಉದ್ಭಟ ಕಾವ್ಯ ಚಂಪೂ ಶೈಲಿಯಲ್ಲಿದೆ, ಆದರೆ ಗದ್ಯವು ಬಹಳ ವಿರಳವಾಗಿ ಉಪಯೋಗಿಸಲ್ಪಟ್ಟಿದೆ. ಇದರಲ್ಲಿ ಕನ್ನಡದಲ್ಲಿ ಖ್ಯಾತವಾಗಿರುವ ಆರು ವೃತ್ತಜಾತಿಗಳಲ್ಲದೆ, ಉಪೇಂದ್ರ ವಜ್ರ, ವಸಂತತಿಲಕ, ಭುಜಂಗ ಪ್ರಯಾತ, ಮಾಲಿನಿ, ತರಳವೃತ್ತ, ಮಣಿಗಣವೃತ್ತ, ಶಿಖರಿಣಿ, ದೋಧಮಲ್ಲಿಕಾ ಮೊದಲಾದ ಸಮವೃತ್ತಗಳನ್ನೂ ಮಾತ್ರಾ ಛಂದಸ್ಸಿನಲ್ಲಿ ಕಂದ, ಮಂದಾನಿಲರಗಳೆ, ಲಯವಿಭೂತಿ, ಲಲಿತರಗಳೆ, ದಂಡಕ, ಉತ್ಸಾಹವೃತ್ತ ಹಾಗೂ ತ್ರಿಪದಿಗಳನ್ನು ಉಪಯೋಗಿಸಿರುವನು.



ಈ ಸಮಗ್ರ ಕಾವ್ಯವನ್ನು ಹನ್ನೆರಡು ಆಶ್ವಾಸಗಳನ್ನಾಗಿ ವಿಭಾಗಿಸಲಾಗಿದೆ. ಒಂದನೇ ಆಶ್ವಾಸದಲ್ಲಿ ನಾಯಕಾಭ್ಯುದಯವನ್ನೂ, ಎರಡನೆಯದರಲ್ಲಿ ವಿಂಧ್ಯ ಪರ್ವತವನ್ನೂ, ಮೂರನೆಯದರಲ್ಲಿ ಪಂಪಾಕ್ಷೇತ್ರವನ್ನೂ, ನಾಲ್ಕನೆಯದರಲ್ಲಿ ನಿರ್ಝರ ಸುರವಧೆಯನ್ನೂ, ಐದನೆ ಆಶ್ವಾಸದಲ್ಲಿ ಶೃತ ಸಂಭಾಷಣೆಯನ್ನು, ಆರನೇಯದರಲ್ಲಿ ಸೌಂದರ್ಯವತಿಯ ಯೌವನವನ್ನೂ, ಏಳನೇಯದರಲ್ಲಿ ಸುಧರ್ಮರಾಯನ ದರ್ಶನವನ್ನೂ, ಎಂಟನೇಯದರಲ್ಲಿ ಸೌಂದರ್ಯವತಿಯ ವಿವಾಹವನ್ನೂ, ಒಂಭತ್ತನೇಯದರಲ್ಲಿ ವಸಂತಋತು ವರ್ಣನೆಯನ್ನೂ, ಹತ್ತನೇಯದರಲ್ಲಿ ರಾತ್ರಿವಿಹಾರವನ್ನೂ, ಹನ್ನೊಂದನೇಯದರಲ್ಲಿ ಓಹಿಲನ ಚರಿತ್ರೆಯನ್ನೂ, ಹನ್ನೆರಡನೇಯದರಲ್ಲಿ ಶಿವಗಿರಿ ಮತ್ತು ಕೈಲಾಸವನ್ನು ವರ್ಣಿಸಿರುವನು.

ಉದ್ಭಟ ಕಾವ್ಯವು ಘೂರ್ಜರದೇಶದ ಭಲ್ಲರೇ ನಗರದಲ್ಲಿ ಆಳುತ್ತಿದ್ದ ಉದ್ಭವ ಮಹಾರಾಜನ ಕಥೆಯನ್ನು ಹೇಳುತ್ತದೆ. ಋಷಿಗಳ ಯಾಗ ರಕ್ಷಣೆಗೆಂದು ಹೋಗಿದ್ದ ಮಹಾರಾಜನು ಶಾಪಗ್ರಸ್ಥವಾದ ಗಿಳಿಯೊಂದರ ಸಹಾಯದಿಂದ ಸುಧರ್ಮ ರಾಜನ ಮಗಳಾದ ಸೌಂದರ್ಯವತಿಯನ್ನು ವಿವಾಹವಾಗುತ್ತಾನೆ. ಸುಖಜೀವನದಲ್ಲಿರುತ್ತಾ ಒಂದು ದಿನ ಪಗಡೆಯಾಡುತ್ತಿದ್ದಾಗ ಓಹಿಲನೆಂಬ ಶಿವಭಕನೊಬ್ಬನು ಆಕಾಶಮಾರ್ಗವಾಗಿ ಹೋಗುತ್ತಿರುವುದನ್ನು ಕಂಡು ಪತ್ನಿಯ ಅಭಿಲಾಷೆಯಂತೆ ರಾಜನು ಹಲವಾರು ಶಿವಭಕ್ತರ ಪುಣ್ಯಕಥೆಗಳನ್ನು ಹೇಳುತ್ತಾನೆ. ಇದುವೇ ಈ ಕಾವ್ಯದ ಕಥಾವಸ್ತು.

ಈ ಕಾವ್ಯದ ಕಥಾನಾಯಕನಾದ ಉದ್ಭಟ ದೇವನ ಜೀವನ ವೃತ್ತಾಂತವನ್ನು ಆಧರಿಸಿ ಕವಿ ಹರಿಹರನಿಂದ ಮೊದಲ್ಗೊಂಡು ಅನೇಕರು ತಮ್ಮ ಕೃತಿಗಳನ್ನು ರಚಿಸಿದ್ದರು. ಆದರೆ ಅದೇ ಕಥಾವಸ್ತುಗಳನ್ನೆತ್ತಿಕೊಂಡು ಸೋಮರಾಜನು ಈ ಕಾವ್ಯವನ್ನು ರಚಿಸುವಾಗ ಹಲವಾರು ಬದಲಾವಣೆಗಳನ್ನು ಮಾಡಿಕೊಂಡಿದ್ದಾನೆ. ಕೆಲವು ಕಾಲ್ಪನಿಕ ಕಥೆಗಳನ್ನೂ, ಸನ್ನಿವೇಶಗಳನ್ನೂ ಸೇರಿಸಿಕೊಂಡಿದ್ದಾನೆ. ಆದರೆ ಅದೆಲ್ಲವೂ ಕಾವ್ಯವನ್ನು ರಸವತ್ತಾಗಿ ಮಾಡಲು ಅನುಸರಿಸಿದ ತಂತ್ರಗಳೆಂದು ಕವಿ ಹೇಳಿಕೊಂಡಿದ್ದಾನೆ. ಹಾಗೆಂದು ಕವಿ ಸೋಮರಾಜನು ಶಿವಭಕ್ತಿಗೆ ಸ್ವಲ್ಪವೂ ಅಪಚಾರವಾಗದಂತೆ ನೋಡಿಕೊಂಡಿದ್ದಾನೆ. ಕೆಲಕಡೆಗಳಲ್ಲಿ ತತ್ವಗಳನ್ನೂ ಹಿತೋಕ್ತಿಗಳನ್ನೂ ವ್ಯಕ್ತಿಗಳ ಬಾಯಿಯಿಂದ ಹೇಳಿಸಿದ್ದಾನೆ. ಒಟ್ಟಿನಲ್ಲಿ ಇದು ಕಾವ್ಯವಾಗಿ ಮನೋರಂಜಕವೂ ಗ್ರಂಥವಾಗಿ ಅನುಕರಣೀಯವೂ ತತ್ವೋಪದೇಶಕವಾಗಿ ದಾರ್ಶನಿಕ ಮೌಲ್ಯವುಳ್ಳದ್ದೂ ಆಗಿದೆ.

ಅಂತೂ ಉದ್ಭಟ ಕಾವ್ಯವು ಹಲವಾರು ಕಥೆಗಳನ್ನೊಳಗೊಂಡ ಒಂದು ದೀರ್ಘವಾದ ಕಥೆ. ರಮ್ಯವಾಗಿ, ರೋಚಕವಾಗಿ ಹೆಣೆಯಲ್ಪಟ್ಟಿದೆ. ಆದರೂ ಪದ್ಧತಿಗೆ ಶರಣಾಗಿ ಮಹಾಕಾವ್ಯದ ಅಷ್ಟಾದಶ ವರ್ಣನೆಗಳನ್ನು ತಂದುಕೊಳ್ಳಲು ಕೆಲವು ಹೊಸ ಸನ್ನಿವೇಶಗಳನ್ನು ಕಲ್ಪಿಸಿಕೊಂಡಿದ್ದಾನೆ–ಎಂಬುದು ಸ್ಪಷ್ಟವಾಗಿ ಕಂಡುಬರುತ್ತದೆ. ವೃತ್ತಗಳ ರಚನೆ, ಶಬ್ದಗಳ ಆಡಂಬರ, ಅಲಂಕಾರಗಳ ಮೇಲಾಟ ಮುಂತಾದುವುಗಳು ಕಾವ್ಯದ ಪ್ರೌಢ್ಯವನ್ನು ಹೆಚ್ಚಿಸಿವೆ. ಇಷ್ಟೊಂದು ಆಕರ್ಷಕವಾದ ಕಾವ್ಯಲಕ್ಷಣದ ದೃಷ್ಟಿಯಿಂದ ಬಹಳ ಉನ್ನತವಾದ ಈ ಕಾವ್ಯವು ಪಂಡಿತರ, ವಿದ್ವಾಂಸರ ಹಾಗೂ ಪಠ್ಯಪುಸ್ತಕ ತಯಾರಕರ ಗಮನಕ್ಕೆ ಬಾರದಿರುವುದು ಖೇದಕರ ಸಂಗತಿ. ಆದರೂ ಕರ್ನಾಟಕದ ಕಡಲ ತಡಿಯ ಮಂದಮಾರುತಕ್ಕೆ ಅರಳಿ ಕಾವ್ಯ ಸುಗಂಧವನ್ನು ಬೀರಿದ ಈ ಕಾವ್ಯಕುಸುಮವು ಸರ್ವಮಾನ್ಯವಾದುದು, ಶಿವನ ಶಿರದಲ್ಲಿ ಸದಾ ಶೋಭಾಯಮಾನವಾಗಿ ಕಂಗೊಳಿಸಬೇಕಾದುದು.





## ಬಸವ ಮಾರ್ಗವೇ ನಿಜ ಸರ್ವೋದಯ


ಸೋ.ದ. ವಿರೂಪಾಕ್ಷಗೌಡ, ಬಸವ ಪ್ರಿಯ 371, ಅಮರಾವತಿ, ಹೊಸಪೇಟೆ, ಬಳ್ಳಾರಿ-ಜಿಲ್ಲೆ.


ಇವತ್ತಿನ ದಿವಸಗಳಲ್ಲಿ ಸರ್ವೋದಯ ಎಂಬ ಶಬ್ದವೇ ನಮ್ಮೆಲ್ಲಾ ಸಕಲ ಭಾರತೀಯರಿಗೆ ಇನ್ನೂ ಆಶ್ಚರ್ಯಚಕಿತ ಶಬ್ದವಾಗಿದೆ. "ಸರ್ವೇಜನೋ ಸುಖೀನೋ ಭವಂತು" ಎಂದೆನ್ನು ಬರುವ ನಮ್ಮೀ ಆಧುನಿಕ ಶತಕದ ಸರ್ವೋದಯದ ಸಿದ್ಧಾಂತವಾಗಿದೆ. ಈ ಸರ್ವೋದಯ ತನನ್ನು ಭಾರತದ ಜಗಜ್ಜಾಹೀರಾತು ಆದುದು ನಮ್ಮ ರಾಷ್ಟ್ರಪಿತ ಮಹಾತ್ಮಗಾಂಧೀಜಿ, ಜಯಪ್ರಕಾಶನಾರಾಯಣ ಅವರಿಂದ. ಸರ್ವ ಪ್ರಜೆ ಸರ್ವ ಸುಖ ಪರಿಕರಕ್ಕೆ ತನ್ನ ಹುಟ್ಟು ಬ್ರಾಹ್ಮಣತನದಿಂದಲೇ ಅರ್ಹನು. ಅಂತೆಯೇ ನಮ್ಮ ಜನನಾಡಿನಲ್ಲಿ ಜನರೆಲ್ಲರಲ್ಲಿ ಇರುವ ಜೇಷ್ಠ–ಕನಿಷ್ಠತ್ವ ಎಂಬ ವ್ಯತಿರಿಕ್ತ ಭಾವನೆಯ ಅಳಿಸಿ, ಎಲ್ಲಾ ಮನುಜರು ಸರ್ವ ಸಮಾನರು ಎಂಬ ವಿಚಾರ ಸರ್ವೋನ್ನತೆಯನ್ನ ಅರಳಿಸಿ. ನಾವು ನಮ್ಮೆಲ್ಲಾ ಸಮಾನ ಆತ್ಮ ಸಾಕ್ಷಿಯಿಂದ ಬಾಳಿ, ಬದುಕು ಸುಂದರ ಕಾಣುವುದೇ ಸರ್ವೋದಯವಾಗಿದೆ.

ಈ ಸರ್ವೋದಯದ ಮೂಲ ಆಕಾರದ ಇತಿಹಾಸವು ನಮ್ಮ ಈ ಭವ್ಯಭಾರತ ಉಪಖಂಡದಲ್ಲಿ ಬಹು ಪ್ರಾಚೀನ ಕಾಲದಿಂದಲೇ ಬಂದಿದೆ. ಮಾನವರ ಬದುಕಿನಲ್ಲಿ ಸರ್ವರೂ ಸರಿ ಸಮಾನರು ಎಂಬ ವಿಚಾರವನ್ನು ಪ್ರಪ್ರಥಮವಾಗಿ ಅರಿವು ಬಿತ್ತಿದ್ದು ಬುದ್ಧನಾಗಿದ್ದನೆ. ನಮ್ಮ ಆರ್ಯ, ಸೂರ್ಯ, ತನದ ವೇದತ್ವ ಪದ್ಧತಿಯಡಿ ಇತರರೆಲ್ಲರ ದ್ರಾವಿಡ ಜೀವನವನ್ನು ಬಹು ಅಸಮಾನತೆಗೆ ತಳ್ಳಿತ್ತು. ಬೌದ್ಧ ಧರ್ಮವು ಈ ಆರ್ಯಜನ ವಿಪರ್ಯಾಸತನವನ್ನು ತನ್ನೆದೆ ಹೊತ್ತು ಅಲ್ಲಾಡಿಸಿತು. ಭೋಗ ಜೀವನವನ್ನು ತಾವು (ಆರ್ಯ) ದೇವ ಗಣ-ಪತಿಗಳು ಅನುಭೋಗಿಸುವುದು ತಮ್ಮ ಅರ್ಹತೆ ಮಾತ್ರ ಎಂಬುದನ್ನು, ಬೌದ್ಧ ಧರ್ಮವು ಭೋಗ ಜೀವನವನ್ನು ಸಂಪೂರ್ಣ ನಿರಾಕರಿಸುವುದೇ ಸರ್ವರನ್ನೂ ಸರ್ವೋದಯದತ್ತ ಮುನ್ನಡೆಸಲ್ಪಡುವುದು ಎಂದು ಸಾರಿದರು. ಆದರೆ ಅಸರ್ವೋನ್ನತೆಯ ವೈದಿಕ ಧರ್ಮ ದರ್ಪದೆದುರು ಈ ಬೌದ್ಧ ಆಂದೋಲನವು, ಬ್ರಾಹ್ಮಣ ಪುರೋಹಿತ ಶಾಹಿತ್ವದ ಕರಾಳ ಹಸ್ತದೆದುರು ಎದೆಗುಂಡಿಗೆ ತಾಳಲಿಲ್ಲ.

ಮುಂದೆ ನಮ್ಮೀ ಭಾರತ ಉಪಖಂಡದ ಜನ ಸರ್ವ ಸಮಾನತೆಯ ಸರ್ವೋದಯದ ದನಿ ಪುನಃ ಮಾರ್ದನಿಗೊಳ್ಳಲು ಸಹಸ್ರ ಸಂವತ್ಸರಗಳನ್ನೇ ಕಾಯಬೇಕಾಯಿತು. ಅಂದರೆ ದ್ರಾವಿಡ ಖಂಡದ ನಮ್ಮಿ ಹಿಂದೂಸ್ತಾನದ ವಲಸೆಯ ಆರ್ಯರು ತಮ್ಮ ವೇದ ಮಾಟದಿ ಸರ್ವ ಜೀವಿಗಳನ್ನು ತಮ್ಮ ಧರ್ಮ ಬಲಿ ಪಶು ಚಾಟಿಗೆ ಒತ್ತಿಕೊಂಡಿದ್ದರ ವಿರುದ್ಧ ಅರ್ಥಾತ್ ಜನ ಸರ್ವೋದಯದ ಪರ ದನಿ ಎತ್ತಲ್ಪಟ್ಟಿದು

ಕ್ರಿ. ಶ. ೧೨ ನೇ ಶತಮಾನದ ಬಸವಾದಿ ಶಿವ-ಶರಣ ಪ್ರಮಥರೆಲ್ಲರ ಸರ್ವಜನ ಸರ್ವೋನ್ನತೆಯ 'ಕಲ್ಯಾಣ ರಾಜ್ಯ' ತನವು ಸಿದ್ಧಿ ಸಂಘರ್ಶತನದಲ್ಲಿಯೇ. ಅಂತೆಯೇ ನಮ್ಮ ಬಸವಕ್ರಾಂತಿಯೇ ಜನ ಸರ್ವೋನ್ನತೆಯ ನಿಜ ಕ್ರಾಂತಿ. ಆದಕಾರಣ ಸರ್ವೋದಯವೇ ಬಸವೋದಯ ಅರ್ಥಾತ್ ಬಸವೋದಯವೇ ನಿಜವಾದಜಗ ಸರ್ವೋದಯ ಎಂದೆನ್ನ ಬಹುದು. ಸರ್ವೋದಯದ ಸರ್ವ ಆಕಾರ ಲಕ್ಷಣದ ಮೊದಲ ರೂವಾರಿ ಬಸವಣ್ಣನೇ ನಿಜ ಪುರುಷ.

ಹೀಗಾಗಿ ನಮ್ಮೀ ದೇಶದಲ್ಲಿ ಈಗ್ಗೆ ೮೦೦ ವರ್ಷಗಳಾಚೆಯೇ ಭವಿ ಜನರೆಲ್ಲರ ಸರ್ವ ಬದುಕು ರಂಗಗಳನ್ನ ಅಂದರೆ ಜನರ ಅರಿವು ಬದುಕು ಧರ್ಮವನ್ನ , ವೈಚಾರಿಕವಾಗಿ, ಸೈದ್ಧಾಂತಿಕವಾಗಿ ಹಾಗೂ ಜನ ಮಾನಸಿಕ ಪ್ರಬುದ್ಧ ವಿಕಾಸಕ್ಕೆಡೆ ಮಾಡ ಬರುವ ವಿಚಾರ ಅರಿವಿನ ಕ್ರಾಂತಿಗೈದ ನಮ್ಮ ಬಸವಣ್ಣ. ನಮ್ಮೀ ಭರತ ಖಂಡದಲ್ಲಿ ಸರ್ವೋದಯದ ನಿಜ ರೂವಾರಿ ಎಂದೆನಿಸುವುದು ಅತ್ಯಂತ ಸೂಕ್ತವೇ ಸರಿ.

ಬಸವನು ಜನ ಸರ್ವೋನ್ನತೆಗೆ ಅರಿತು ಜಾಡ್ಯವಾಗಿದ್ದ ಆರ್ಯ ಅಂಕುಶದ ಮೂಢ ಗೊಡ್ಡು ಕಟು ಸಂಪ್ರದಾಯಗಳನ್ನು ತನ್ನ ಜನ ಸಮರವು ಅನುಭವ ಮಂಟಪದಿ, ಜನಮುಕ್ತ ವಿಚಾರಾಳಾತ್ವದಿ ನಿರ್ವೀರ್ಯಗೊಳಿಸಿದನು. ವೈಚಾರಿಕ ವಿಚಾರಮಂಥನದೆದುರು, ವರ್ಣಸಂಕರಾದಿ ಭಿನ್ನ ಭಿನ್ನತೆಯ ಅಸಮಾನತೆ ಅಸರ್ವೋನ್ನತೆಯ ಸಂಪ್ರದಾಯಗಳು, ಜನ ಶರಣಾಂದೋಲನದೆದುರು ಉಚ್ಚಾಟನೆಗೊಂಡವು.

ಅಂತೆಯೆ ವರ್ಣಾ ವರ್ಗಾತೀತ, ಮೇಲು ಕೀಳು ತನದ ಸ್ಪೃಶ್ಯ ಅಸ್ಪೃಶ್ಯತನಗಳನ್ನ ನಮ್ಮ ಬಸವ ಶರಣರೆಲ್ಲರ ಜನ ಮುಕ್ತ ವಿಚಾರ ಅರಿವು ಖಡ್ಗದ ತನ್ಮೂಲಕ ಆರ್ಯ ರೂಢಿತನದ ಒಂದು ಕಣ್ಣಿಗೆ ಸುಣ್ಣ ಮಗದೊಂದು ಕಣ್ಣಿಗೆ ಬೆಣ್ಣೆತನದ, ಅಸಮಾನತೆಯ ಸ್ಪೃಶ್ಯ ಅಸ್ಪೃಶ್ಯದ ಮೇಲಿದ್ದ ಜನ ಮೂಢ ನಂಬಿಗೆಯನ್ನ ನಿರ್ಮೂಲಗೊಳಿಸಿತು. ಬಸವಣ್ಣನ ಜನ ಸಮ ಬದುಕು ತನದ ಮಾನವ ಧರ್ಮವು ಜನ ಸರ್ವೋನ್ನತೆಯ ಸರ್ವೋದಯದ ಮೂಲ ಆಕರವಾಯಿತು.

ನಿಜವಾದ ಸರ್ವೋದಯದ ಅರ್ಥ ಯಾವ ದೇಶವು ತನ್ನ ಸಮಾಜದಲ್ಲಿ ಎಲ್ಲಾ ಪ್ರಜೆಗಳು ಜಾತ್ಯಾತೀತ ಮಾನವ ಜಾತಿ ಸಮಾನರೆಂದೂ, ಎಲ್ಲಾ ಪ್ರಜೆಗಳು ತಮ್ಮ ತಮ್ಮ ಕಾಯಕ ವೃತ್ತಿ ಪರಿಪಾಲನೆಯಲ್ಲಿ ಸರ್ವಸಮಾನರು, ದೇವೋಪಾಸನೆ, ಆರಾಧನೆಯಲ್ಲಿ ಸರ್ವರೂ ಸಮಾನರು, ಎಲ್ಲಾ ಪ್ರಜೆಗಳು ತಮ್ಮ ತಮ್ಮ ವಿಚಾರ ತತ್ವ ನೀತಿಗಳ ಅನಿಸಿಕೆ ಅಭಿಪ್ರಾಯಗಳನ್ನ ಅಭಿವ್ಯಕ್ತ ಪಡಿಸುವಲ್ಲಿ



ಸರ್ವ ಸಮಾನರು. ಅರ್ಥಾತ್ ಜಾತ್ಯಾತೀತ ವರ್ಣವರ್ಗಾತೀತ ಮೇಲು ಕೀಳು ರಹಿತ ಜನ ಮುಕ್ತ ಸಮ ಬದುಕು ಸ್ವಾತಂತ್ರ್ಯತನದಲ್ಲಿಯೇ ಇಂದು ಸರ್ವೋದಯದ ಸುಂದರ ಅರ್ಥ ಅಡಗಿದೆ ಎಂದನ್ನಬಹುದು.

ಈ ರೀತಿಯ ಸರ್ವೋದಯ ಪ್ರತೀಕವಾದ ಸಮಾನ ಜನ, ಸಮಾಜದ ನಿಜ ಅರ್ಥವಂತಿಕೆಯು, ಈ ಹಿಂದೆ ನಮ್ಮೀ ವಿಶಾಲ ಕನ್ನಡ ನಾಡಿನ ಬಸವ ಶರಣರೆಲ್ಲರ ಕಲ್ಯಾಣ ಕ್ರಾಂತಿಯಡಿ ಸಾಕ್ಷಾತ್ ಪ್ರಯೋಗ ಅನುಷ್ಠಾನಗೊಂಡಿತ್ತು ಅನುಭವ ಶರಣ ಮಂಟಪದಡಿ. ಆ ೧೨ ನೇ ಶತಮಾನದಲ್ಲಿಯ ಅನುಭವ ಮಂಟಪವು ಅದುವರೆಗೂ ಅನೇಕ ಸಹಸ್ರಾರು ವರ್ಷಗಳಿಂದ ವೈದಿಕ ಪುರೋಹಿತಶಾಹಿ ಜನರೆಲ್ಲರ ಜಾತಿ, ವರ್ಗ, ವರ್ಣ, ಮೇಲು ಕೀಳು, ಈ ರೀತಿಯಡಿ ಇದ್ದ ವರ್ಣ ವ್ಯವಸ್ಥಿತ ಸಮಾಜವನ್ನ ಅಲ್ಲಗಳೆದು ಸರ್ವ ಜನರಿಗೂ ಸಮಬಾಳು ಸರ್ವೋನ್ನತೆಯ ಅರಿವು ಬೀಜವನ್ನ ಜನಮನದಿ ಬಿತ್ತಿ ಬೆಳಗಿಸಿದರು.

ಬಸವಾದಿ ಶರಣ ಪ್ರಮಥರೆಲ್ಲರೂ ತಮ್ಮ ನೇರ ಮುಕ್ತ ನಡೆನುಡಿ ನಾಡು ಜನ ಅಭಿಮಾನದಿ ನ್ಯಾಯ ನಿಷ್ಠುರದ ಪ್ರಗತಿ ಪರ ವಿಚಾರ ಹೆಜ್ಜೆಗೆ ಆದೆಂದೂ ಹಿಂದೇಟು ಹಾಕಲಿಲ್ಲ. ಇದರ ಪ್ರತೀಕವಾಗಿ ಅಂದು ಆ ೧೨ ನೇ ಶತಮಾನದಲ್ಲಿ ಕನ್ನಡ ನಾಡ ಶರಣ ಜನರೆಲ್ಲರೂ ಬಸವಣ್ಣನ ಬಗ್ಗೆ ಅತ್ಯಂತ ಪ್ರೇಮಾಭಿಮಾನವನ್ನ ತಮ್ಮದೇ ತಾಳಬಂದರು. ತನ್ಮೂಲಕ ಜನ ಸರ್ವೋನ್ನತಾ ಪ್ರತೀಕವಾಗಿ ವಿಶ್ವ ಮಾನವ ಧರ್ಮದ ಹುಟ್ಟು ಆಂದೋಲನದ ಅಂಕುರಗೊಂಡಿತು. ಪ್ರತಿಯೊಬ್ಬ ಜನ ಶರಣರು ಜನ ಸಮಾಜದ ಬದುಕು ಬಾಳ್ವೆಯ ಸರ್ವೋನ್ನತೆಯ ಸ್ಥಿರಗೊಳಿಸುವ ಸಲುವಾಗಿ ತಮ್ಮಗಳ ಪ್ರಾಣಾಭಿಮಾನದ ಹಂಗನ್ನು ತುಚ್ಛಗೊಳಿಸಿ ಬಸವ ಸರ್ವೋನ್ನತೆಯ ಸಿದ್ಧಾಂತಕ್ಕಾಗಿ ತಮ್ಮನ್ನೇ ತಾವು ಹುತಾತ್ಮಗೊಳಿಸಿಕೊಂಡುದು ಈ ಭವಿ ಪ್ರಪಂಚದಲ್ಲಿ ಈ ಕನ್ನಡ ನಾಡ ಕರ್ನಾಟಕ ಇತಿಹಾಸವು ಆ ಚಂದ್ರಾಕೃತಿಯೇ ಸರಿ, ಅಂದರೆ ಸರ್ವೋನ್ನತೆಯ ಜನ ಕನ್ನಡಿ ಮೆರೆದುದು ಜಗ ಇತಿಹಾಸದ ಕನ್ನಡ ನೆಲವೇ ಪ್ರಥಮ.

ಬಸವಾದಿ ಶರಣರೆಲ್ಲರ ಈ ಜನ ಸರ್ವೋನ್ನತೆಯ ಬಸವ ಸರ್ವೋದಯ ಧರ್ಮ ಬೀಜ ತಳಿಯಲ್ಲಿ ಸಹಸ್ರಾರು ಶರಣರು ತಮ್ಮ ಭಗೀರಥ ಪ್ರಯತ್ನಧಾರಿಗಳಾದರು. ಈ ಬಸವ ಸರ್ವೋದಯ ಅನುಷ್ಠಾನದ ಬಸವ ಹೋರಾಟದಲ್ಲಿ ಚೆನ್ನಬಸವಣ್ಣ ಅಲ್ಲಮಪ್ರಭು, ಅಕ್ಕನಾಗಲಾಂಬಿಕೆ, ನೀಲಾಂಬಿಕೆ, ಮಾದರ ಹರಳಯ್ಯ, ಆಯ್ದಕ್ಕಿಮಾರಯ್ಯ ಅಂಬಿಗರ ಚೌಡಯ್ಯ, ಕೇತಯ್ಯ, ಅಕ್ಕಮಹಾದೇವಿ ಹೀಗೆ ಅಪಾರ ಶರಣ ಪ್ರವಾಹವೇ ಉಕ್ಕಿ ಹರಿದು ಶರಣರ ಸರ್ವೋದಯ ಶರಣ ಧರ್ಮ ಪತಾಕೆಯನ್ನು ಜಗಜ್ಜಾಹೀರುಗೊಳಿಸಿತು.

ಅಂತಯೇ ನಮ್ಮ ಭಾರತ ರಾಷ್ಟ್ರದಲ್ಲಿಯ ಕ್ರಿ. ಶ, ೧೨ ನೇ ಶತಮಾನದ ಕಾಲಮಾನವು ಜಗತ್ತಿನಲ್ಲಿಯೇ ಜನ ಸರ್ವೋದಯದ ಪ್ರಪ್ರಥಮ ವಿಚಾರವಂತಿಕೆ ಹೊಂದಿದ ರಾಷ್ಟ್ರವೇ ಸರಿ. ಆದಕ್ಕಾಗಿಯೇ ವಿದೇಶಿಯರ ಉವಾಚವೇ ಇದೆ. "ಬಸವಣ್ಣ ಭಾರತ ಜನತೆಯ ಮೊಟ್ಟ ಮೊದಲ ಮುಕ್ತ ವಿಚಾರವಂತ" ಅಂತ. ಜನ ಸರ್ವೋದಯದ ಆಳತೆಗೋಲಿನಲ್ಲಿ ಆದೇಶದ ನಿಜ ಕಲ್ಯಾಣ ರಾಜ್ಯ ಅನುಷ್ಠಾನದ ನಿಜಮಾಪನ ಆಡಗಿದೆ. ಹಾಗೆಯೇ ಸರ್ವೋದಯಕ್ಕೆ ನಮ್ಮ ಕನ್ನಡ ನಾಡ ಬಸವೋದಯವೇ ಮೂಲಸೂತ್ರವಾಗಬಲ್ಲದು. ಮತ್ತು ಇದರಡಿಯಲ್ಲಿಯೇ ನಮ್ಮ ಭಾರತ ರಾಷ್ಟ್ರದ ನಿಜವಾದ ಅಭ್ಯುದಯದ ಜನ ಸರ್ವೋದಯದ ಲಕ್ಷಣ ಮಾರ್ದನಿಗೊಳ್ಳದಿರದು. ಆದಕ್ಕಾಗಿ ಯಾವತ್ತೂ ಸರ್ವಜನರು ಬಸವೋದಯವೇ ನಿಜವಾದ ಜನ ಸರ್ವೋದಯ ಎಂಬುದು ನಿಜ ಮನಗಾಣಬೇಕಾಗಿದೆ.

---

## ಮಲೆನಾಡು

ಕೆ.ಎನ್. ರಾವ್, ದಾಂಡೇಲಿ.

ಧಾಟಿ:- ಕೋಲಾಟದ ಪದಗಳಂತೆ.

ಮಲೆನಾಡು ನಮ್ಮನಾಡು। ಅಂದದಾ। ಮಲೆನಾಡು ನಮ್ಮನಾಡು॥ಪ॥
ಮಲೆನಾಡು ನಮ್ಮನಾಡು। ಯಾಲಕ್ಕಿ ಅಡಿಕೆಯ ಬೀಡು॥
ಮದ್ದಿಗೆಲ್ಲವು ಮೇಲು। ಕಾಳು ಮೆಣಸಿನ ಗೂಡು॥೧॥ ಮಲೆನಾಡು॥

ಬನಸಿರಿಯಾದದಿ। ಬನವಾಸಿ ಕೂಟದಿ॥
ಮನಕೆ ಆನಂದವೀವ। ಸ್ವಾದಿಯ ಕೋಟೆಯು॥೨॥ ಮಲೆನಾಡು॥

ಬಿಳಿಗಿಯ ಕೋಟೆಯು। ಕೆಳದಿ ಇಕ್ಕೇರಿಯು॥
ಉಳುವಿ ಭೈರವಯಾಣ। ಕಳೆಯ ಕದಂಬರಾಜ್ಯ ॥೩॥ ಮಲೆನಾಡು॥

ವರದೆ ಧರ್ಮಾನದಿ। ಮೆರೆವಘನಾಶಿನಿ।
ಶರಾವತಿಕ ಳಿ। ಚಕ್ರೀ ಗಂಗೆಯರ ॥೪॥ ಮಲೆನಾಡು॥

ನೆಲ್ಲು ಕಬ್ಬಿನ ತೋಟ। ತೆಂಗು ಮಾವಿನ ತೋಟ॥
ನೀಲ ವರ್ಣದಗಿರಿ। ಶೋಭೆ ಕನ್ನಡನಾಡು॥೫॥ ಮಲೆನಾಡು ನಮ್ಮನಾಡು॥



## ಶ್ರೀ ಗುರುದೇವ ಉದ್ದಾನ ಯೋಗೀಶ್ವರ

—ವಿದ್ವಾನ್ ನಂದಿಬಸವಯ್ಯ, ನಿವೃತ್ತ ಸಂಸ್ಕೃತ ಪಂಡಿತರು, ತುಮಕೂರು.

ಶ್ರೀಮದ್ಭಾಸುರ ಭಸ್ಮರೇಖ ಧವಲಂ ಸದ್ಯೋಗ ಸಂಸಿದ್ಧನುಂ।
ಶ್ರೀಮಚ್ಛಿದ್ಧರನಂತ ನಿತ್ಯಸುಖದಂ ಸುಜ್ಞಾನ ಸಂವರ್ಧನಂ॥
ಶ್ರೀಮತ್ಪುಣ್ಯ ವರ ಪ್ರದಾತ್ಮಕ ಶಿವಂ ಶ್ರೀ ಸಿದ್ಧಗಂಗಾ ಪ್ರಿಯಂ।
ಶ್ರೀಮತ್ಪ್ರೇಮದಿ ಭಕ್ತರಂ ಸಲಹುಗೆ ಶ್ರೀ ಸಿದ್ಧಲಿಂಗೇಶ್ವರಂ॥

ಶ್ರೀಮತ್ಸದ್ಗುಣಮೂರ್ತಿ ಮದ್ಗುರುವರಂ ನಿತ್ಯಾನ್ನದಾನಪ್ರಿಯಂ।
ಶ್ರೀಮತ್ಸಂಸ್ಕೃತ ವಿದ್ಯಾವರ್ಧನ ವಿಭುಂ ಸದ್ಬೋಧ ಚಕ್ರಾಧಿಪಂ
ಶ್ರೀಮದ್ಯೋಗ ವಿರಾಜಮಾನ ನಭವಂ ಯೋಗಿ ವ್ರಜಾವಂದಿತಂ
ಶ್ರೀಮನ್ಮಂಗಳ ಪುಣ್ಯದಿಂ ಮೊಳಗುವಾ ಶ್ರೀ ಸಿದ್ಧಗಂಗಾಧಿಪಂ।
ಶ್ರೀಮದ್ದೇವನು ಕಾಯ್ವುದೀ ಶತಕಮಂ ಉದ್ದಾನಯೋಗೀಶ್ವರಂ
ಶ್ರೀಮತ್ಸ್ವಾಮಿಯು ಕಾಯ್ವುದೆಮ್ಮನನಿಶಂ ಉದ್ದಾನಯೋಗೀಶ್ವರಂ

ಧರೆಯೊಳ್ ಧಾರ್ಮಿಕ ತತ್ವಮಂ ಪ್ರಕಟಿಸಲ್ ಪುಟ್ಟಿರ್ಪ ಪಂಚಾನನಂ
ನರನಜ್ಞಾನದ ಕುತ್ತಮಂ ಬಡಿದಿಡಲ್ ಬಂದಿರ್ಪ ಧನ್ವಂತರೀ
ತಿರೆಯೊಳ್ ಬೇಳ್ಪರಭೀಷ್ಟಮನ್ನೊಡರಿಸಲ್ ನಿಂದಿರ್ಪ ಕಲ್ಪದ್ರುಮಂ
ಗುರುದೇವಂ ಶಿವಪುತ್ರನೀಗೆ ನಲುವಿಂದೆಮ್ಮಿಷ್ಟ ಸಂಸಿದ್ಧಿಯಂ

ದುರಿತಾರಣ್ಯವ ಸುಡುವಡೆ
ಭರದಿಂ ದಾಂಟುವೊಡೆ ಘೋರ ಭವಸಾಗರಮಂ
ಪರತರ ಸುಖವಂ ಪಡೆವೊಡೆ
ಗುರುಭಕ್ತಿಯೇ ಮಾಗಿ ಗುರುಕುಲತಿಲಕ

# ವಿದ್ಯಾರ್ಥಿಗಳಲ್ಲಿ ಶಿಸ್ತಿನ ಪಾತ್ರ

ಎಚ್. ಗವಿಸಿದ್ದಯ್ಯ. ಶಿಕ್ಷಕರು ಗ್ರಾಮಾಂತರ ಪ್ರೌಢಶಾಲೆ ಅವತಿ,
ದೇವನಹಳ್ಳಿ ತಾ॥ ಬೆಂಗಳೂರು ಜಿಲ್ಲೆ

ವ್ಯಕ್ತಿಯ ಸರ್ವತೋಮುಖ ಅಭಿವೃದ್ಧಿಯಲ್ಲಿ ಶಿಸ್ತಿನ ಪಾತ್ರ ಮಹತ್ತರವಾದುದು. ಅಂದರೆ ಶಿಸ್ತು ವ್ಯಕ್ತಿಯ ವ್ಯಕ್ತಿತ್ವವನ್ನು ರೂಪಿಸುವುದರಲ್ಲಿ ವಿಶೇಷವಾದ ಪಾತ್ರವಹಿಸುತ್ತದೆ. 'A man without discipline is like an engine without a break' ಎನ್ನುವ ಆಂಗ್ಲ ಗಾದೆಯಂತೆ ಶಿಸ್ತಿಲ್ಲದಿರುವ ವ್ಯಕ್ತಿ; ಬ್ರೇಕಿಲ್ಲದಿರುವ ವಾಹನದಂತಾಗುವನು.

ವಿದ್ಯಾರ್ಥಿಗಳಿಗೂ ಸಹ 'ಶಿಸ್ತು' ಬಹಳ ಮುಖ್ಯ. ಪ್ರತಿ ಹಂತದಲ್ಲೂ ಸಹ ಅವರು ಶಿಸ್ತನ್ನು ಪಾಲಿಸಬೇಕಾಗುತ್ತದೆ. ಒಂದು ದಿನದ ಅವಧಿಯಲ್ಲಿ ಅಂದರೆ, ಮುಂಜಾನೆಯಿಂದ ಪ್ರಾರಂಭವಾಗಿ ರಾತ್ರಿ ಮಲಗುವವರೆಗೆ ಶಿಸ್ತನ್ನು ಪಾಲಿಸುವ ಅಭ್ಯಾಸವನ್ನು ರೂಢಿಸಿಕೊಳ್ಳಬೇಕು. ಮುಂಜಾನೆ, ವಿದ್ಯಾರ್ಥಿಗಳು ಹಾಸಿಗೆಯಿಂದ ಮೇಲೆದ್ದು ಕೈಕಾಲು ಮುಖ ತೊಳೆದು ವ್ಯಾಸಂಗ ಮಾಡಲು ಕುಳಿತುಕೊಳ್ಳಬೇಕು. ಆ ಪ್ರಶಾಂತವಾದ ವಾತಾವರಣದಲ್ಲಿ ಓದಿದ ವಿಷಯಗಳು ಬಹಳದಿನ ನೆನಪಿನಲ್ಲಿ ಉಳಿಯುವವು. ಅಲ್ಲದೆ ಇಂಗ್ಲಿಷ್ ಮತ್ತು ಕನ್ನಡ ಪದ್ಯಗಳನ್ನು ಆ ವೇಳೆಯಲ್ಲಿ ಓದುವುದರಿಂದ ಕಂಠಪಾಠಕ್ಕೆ ಗೊತ್ತುಪಡಿಸಿದ ಪದ್ಯಗಳನ್ನು ಸುಲಭವಾಗಿ, ಬಹು ಬೇಗ ಕಂಠಪಾಠಮಾಡಿಕೊಳ್ಳಬಹುದು.

ವ್ಯಾಸಂಗದ ನಂತರ, ತಂದೆ ತಾಯಿಗಳಿಗೆ ಅವರ ಕೆಲಸದಲ್ಲಿ ಸಹಾಯ ಮಾಡುವ ಅಭ್ಯಾಸವನ್ನು ವಿದ್ಯಾರ್ಥಿಗಳಾದವರು ಬೆಳೆಸಿಕೊಳ್ಳಬೇಕು ವಿದ್ಯಾರ್ಥಿಗಳಾದವರು ಪ್ರತಿದಿನ ಮುಂಜಾನೆ ತಪ್ಪದೆ ಸ್ನಾನ ಮಾಡಬೇಕು. ಬಿಸಿ ನೀರಿಗಿಂತ ತಣ್ಣೀರಿನ ಸ್ನಾನ ಬಹಳ ಒಳ್ಳೆಯದು.

ನಂತರ ಶಿಕ್ಷಕರು ಕೊಟ್ಟ ಮನೆಗೆಲಸವನ್ನು ಮಾಡುವುದು.

## ನಿಯಮಿತ ಕಾಲಕ್ಕೆ ಪಾಠಶಾಲೆಗೆ ಹೋಗುವುದು

ವಿದ್ಯಾರ್ಥಿಗಳು ನಿಯಮಿತ ಕಾಲಕ್ಕೆ ಪಾಠಶಾಲೆಗೆ ಹೋಗುವ ಅಭ್ಯಾಸವನ್ನು ಬೆಳೆಸಿಕೊಳ್ಳಬೇಕು. ಶಾಲೆಯ ಹೊರಗಡೆ ಮತ್ತು ಒಳಗಡೆ, ವಿದ್ಯಾರ್ಥಿಗಳಾದವರು ತಮ್ಮ ಸಹಪಾಠಿಗಳೊಂದಿಗೆ ಸ್ನೇಹ ಔದಾರ್ಯಗಳ ಗುಣವನ್ನು ಬೆಳೆಸಿಕೊಳ್ಳಬೇಕು. ಸಣ್ಣ ಪುಟ್ಟ ವಿಷಯಗಳಿಗೆ ವಾದಮಾಡಬಾರದು. ಜಗಳವಾಡ ಬಾರದು.



'ಮೃದು ನುಡಿಯೇ ಸಕಲ ಜಪ ತಪಂಗಳಯ್ಯ' ಎನ್ನುವ 'ಜಗಜ್ಯೋತಿ' ಬಸವಣ್ಣನವರ ವಚನ ದಂತೆ, ಮೃದುವಾದ ಮಾತುಗಳಿಂದ ಪಾಠ ಶಾಲೆಯಲ್ಲಿರುವ ಎಲ್ಲಾ ವಿದ್ಯಾರ್ಥಿಗಳ ಸ್ನೇಹ ಬೆಳೆಸ ಬಹುದು. ಅಲ್ಲದೆ ಪಾಠಶಾಲೆಯ ಎಲ್ಲಾ ಶಿಕ್ಷಕರಿಗೂ ಪ್ರೀತಿಯ ಮತ್ತು ಜಾಣ ವಿದ್ಯಾರ್ಥಿಯಾಗಿರಬೇಕು. ಜಂಭವಿರದೆ, ದೈನ್ಯತೆಯ ಸಾಕಾರ ಮೂರ್ತಿ ಎನಿಸಬೇಕು.

'ಇಲ್ಲಿ ಸಲ್ಲುವರು, ಅಲ್ಲಿಯೂ ಸಲ್ಲುವರಯ್ಯ' ಎನ್ನುವಂತೆ, ವಿದ್ಯಾರ್ಥಿಗಳು ಮನೆಗೆ ಮಾಣಿಕ್ಯವಾಗಿ ಸ್ನೇಹಿತರಲ್ಲಿ ಸ್ನೇಹ ರೂಪಿಗಳಾಗಿ, ಶಿಕ್ಷಕರಲ್ಲಿ ನೆಚ್ಚಿನ ಶಿಷ್ಯರಾಗಿ, ವ್ಯಾಸಂಗದಲ್ಲಿ ಹೆಚ್ಚಿನ ಆಸಕ್ತಿ ಬೆಳಸಿ ಕೊಳ್ಳುವುದರ ಮೂಲಕ ತಮ್ಮ ಸರ್ವಮುಖ ಬೆಳವಣಿಗೆಯನ್ನು ರೂಪಿಸಿಕೊಳ್ಳಬಹುದು.

ಹೀಗೆ 'ಶಿಸ್ತು' ಪ್ರತಿಯೊಬ್ಬ ವಿದ್ಯಾರ್ಥಿಯ ಜೀವನವನ್ನು ರೂಪಿಸುವ ರೂವಾರಿ ಯಾಗಬಲ್ಲದು.

# ಶ್ರದ್ಧಾಂಜಲಿ

ಮಾಜಿ ಮುಖ್ಯ ಮಂತ್ರಿಗಳಾದ ಶ್ರೀ ಆರ್. ಗುಂಡೂರಾಯರು ನಿಧನರಾದುದು ಕರ್ನಾಟಕ ರಾಜ್ಯಕ್ಕೆ ತುಂಬಾ ನಷ್ಟವಾಗಿದೆ.

ಶ್ರೀಯುತರು ರಾಜ್ಯದ ಅಭಿವೃದ್ಧಿಗೆ ಸದಾ ಚಿಂತಿಸುತ್ತಿದ್ದರು. ಉತ್ಸಾಹ ನೇರವಾದ ಮಾತು ಹಾಗೂ ಕ್ರಿಯಾಶೀಲ ನಿರ್ಧಾರ ನಿರ್ಣಯಗಳನ್ನು ಶ್ರೀ ಗುಂಡೂರಾಯರ ವ್ಯಕ್ತಿತ್ವದಲ್ಲಿ ಕಾಣಬಹುದಾಗಿತ್ತು. ಸಾರ್ವಜನಿಕ ಜೀವನದಲ್ಲಿ ತಮ್ಮದೇ ಆದ ವೈಯಕ್ತಿಕ ವೈಶಿಷ್ಟ್ಯತೆಗಳನ್ನು ಅವರು ರೂಪಿಸಿಕೊಂಡಿದ್ದರು. ಮಠಮಾನ್ಯಗಳ ಪಾವಿತ್ರಾತ್ಮಕ ಅಸ್ತಿತ್ವವನ್ನ ಸಂರಕ್ಷಿಸಿಕೊಂಡು ಬರಲು ಶ್ರೀ ಗುಂಡೂರಾಯರು ವಿಶೇಷವಾಗಿ ಆಸಕ್ತಿ ವಹಿಸಿದರು. ಔದಾರ್ಯ ಹಾಗೂ ಮುಕ್ತ ನಡೆ-ನುಡಿ ಅವರ ಗುಣಗಳಾಗಿದ್ದವು ಗುಂಡೂರಾಯರ ನಿಧನ ದಿಂದ ರಾಜ್ಯ ಒಬ್ಬ ನಿಷ್ಠಾವಂತ ಪ್ರಗತಿಪರ ನಾಯಕನನ್ನ ಕಳೆದು ಕೊಂಡಂತಾಗಿದೆ, ಅವರ ಕುಟುಂಬ ವರ್ಗದವರಿಗೆ ಉಂಟಾಗಿರುವ ದುಃಖವನ್ನು ಸಹಿಸುವ ಶಕ್ತಿಯನ್ನು 'ದಿವಂಗತರ ಆತ್ಮಕ್ಕೆ ಶಾಂತಿಯನ್ನ ಕರುಣಿಸಲೆಂದು ಪ್ರಾರ್ಥಿಸುತ್ತಾ "ಸಿದ್ಧಗಂಗಾ" ತನ್ನ ಶ್ರದ್ಧಾಂಜಲಿಯನ್ನು ಸಮರ್ಪಿಸಿದೆ.

## ಗುರು ಸ್ತೋತ್ರ

—ಗುರು ಪುತ್ರಿ ಎ. ಹೆಚ್. ಬಸಮ್ಮತಾಯಿ, ದೊಡ್ಡಕನ್ನಳ್ಳಿ ತಪೋವನ, ಬೆಂಗಳೂರ-35

ಗುರುವೀನ ನೆನೆದೇನೆ ಮರೆಯಾದೆ ವ:ನದೊಳು
ಅರುವೀನ ಆಲಯದ ಮಂಟಪದೀ
ಅರುವೀನ ಆಲಯದ ಮಂಟಪದ ಮನೆಯಲ್ಲಿ
ಪರಶಿವ ಕಂಡೂ ಬದುಕೀದೆ ||೧||

ಧರೆಯ ದಕ್ಷಿಣಕಿಂದು ನರನ ರೂಪಾಗಿ ಬಂದೂ
ಕರುಣೀತಾನೆಂದು ಕರೆಯೂತ ಕರುಣೀ ತಾನೆಂದು
ಬಿರುದು ಕಟ್ಟುತ ಬಂದು ಧರಣಿ ಗುಪಕಾರಿ
ಗುರುರಾಯಾ ||೨||

ಅಂತರಂಗದ ಪೇಟೆ ಸಂತೆಗೋದೆನೆ ತಂಗಿ
ಚಿಂತಿಸದೆ ಕೊಂಡೇ ರತ್ನಾವ
ಚಿಂತಿಸದೆ ನಾಕೊಂಡೇ ರತ್ನಾವ ಬೆಳಕೀಲಿ
ಕಾಂತೆಕೇಳವ್ವಾ ಕೌತುಕವಾ ||೩||

ಕಂಗಳೂರನ ಕಂಡೆ ಮಂಗಳಾತ್ಮನ ಕಂಡೇ
ಗಂಗೇಯಮುನೆಯರ ಕಂಡೂ ಗವಿ ಹೊಕ್ಕೆ
ಗಂಗೇಯಮುನೆಯಾರ ಕಂಡೂ ಗವಿ ಹೊಕ್ಕೆ ಗುರುಪಾದ
ಅಂಗದೋಳ್ ಕಂಡೂ ವೈಯ್ಯ ಮರತೇ ||೪||

ಸತ್ಯಸದ್ಗುರು ಬಂದಿ ಮತ್ತೆ ಪಾದವ ಸೇರಿ
ನಿತ್ಯ ಸುಳ್ಳಾಡಿದರೆ ಒಪ್ಪದವ್ವಾ ನಿತ್ಯಾದಿ
ಸುಳ್ಳಾಡಿ ದಿನಗಳೆದು ಸತ್ತಾರೆ
ಮತ್ತಾಷ್ಮ ಭಾದೇತಪಾದವ್ವಾ ||೫||

ಭಕ್ತ ಭಾವದಿ ನಾನು ಯುಕ್ರಿಸಂಗ್ರಹದಿಂದ
ಮುಕ್ತಿಯ ತೌರಾಮನೆಗೋದೆ ಮುಕ್ತಿಯ ತೌರೆನ್ನ
ಮನೆಗೋದೆ ತಂಗೆವ್ವ ಪ್ರಾಪ್ತನಹುದವ್ವಾ ಪರಾವಸ್ತು
ಪಂಚಾಕ್ಷರಿಯ ದೀಪ್ತಾದ ಮಾಲಾ ಸೇರಿದೆಸೇ ||೬||

"SIDDAGANGA" MONTHLY Reg. No. KRNQ-9

"ಮಾಟಕೂಟ" ಎಂಬ ಮಾತ ಕೇಳಲಾಗದು, ಶಿವಾ ಶಿವಾ! ನಿಮ್ಮ ಭಕ್ತರಿಗೆ "ಮಾಡಿದೆ" ನೆನ್ನದಿರೆಂದು ಶ್ರೀ ಗುರುಲಿಂಗವು ಕೃಪೆಯು ಮಾಡಿದ ಕಾರಣ, ಅಲ್ಲಿ ಮಾಡುವವರೂ ಮಾಡಿಸಿ ಕೊಂಬವರೂ ನೀವೇ ಕೂಡಲಸಂಗಮದೇವಾ.

ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು, ಮರ್ಮವನರಿಯದ ಮಾಟ ಸುಯಿದಾನದ ಕೇಡು! ಬಂದ ಸಮಯೋಚಿತವನರಿಯದಿದ್ದರೆ ನಿಂದಿರಲೊಲ್ಲ ಕೂಡಲಸಂಗಮದೇವಾ.

—ಶ್ರೀ ಬಸವೇಶ್ವರ



ಶ್ರೀ ಸಿದ್ಧಲಿಂಗೇಶ್ವರ ಮುದ್ರಣಾಲಯ, ಶ್ರೀಸಿದ್ಧಗಂಗಾ ಕ್ಷೇತ್ರ 7204